ಭಾಗ-7

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ







ಅಧ್ಯಕ್ಷರು :

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿ ಆಚಾರ್ಯ
ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

|| ಶ್ರೀಮನ್ ಮೂಲರಾಮೋ ವಿಜಯತೇ || || ಶ್ರೀ ಗುರುರಾಜೋ ವಿಜಯತೇ ||

## ಭಾಗ - ೭

ಶ್ರೀಪದ್ಮನಾಭತೀರ್ಥಮುನಿ ವಿರಚಿತ
**ಸತ್ತರ್ಕದೀಪಾವಳಿ**

ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತ
**ತತ್ವಪ್ರದೀಪ**

ಶ್ರೀಜಯತೀರ್ಥಮುನಿ ವಿರಚಿತ
**ತತ್ವಪ್ರಕಾಶಿಕಾ**

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
**ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ**

**ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ**

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

||

'ಭಾವದೀಪ' : ಮಂತ್ರಾಲಯ ಕ್ಷೇತ್ರದಲ್ಲಿ ದುರ್ಮುಖಿ || ಜ್ಯೇಷ್ಠ ಮಾಸ || ಜೂನ್ ೨೦೧೬ ರಲ್ಲಿ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | | |
|---|---|---|
| ಪ್ರಕಾಶನ | : | ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : | ವಿ || ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.<br>ದೂರವಾಣಿ : 914149120 |
| ಪ್ರಥಮಮುದ್ರಣ | : | 2015 |
| ಪುಟಗಳು | : | 704 |
| ಬೆಲೆ | : | 600 ರೂ |
| ಪ್ರತಿಗಳು | : | 1000 |





ಅಕ್ಷರಜೋಡಣೆ :

ಶ್ರೀ ಬೆಮ್ಮತ್ತಿ ಶ್ರೀನಿವಾಸ
ಶ್ರೀಮತಿ ಎಸ್. ನಾಗಲತಾ

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

## Vol. - 7

SRI PADMANABHATIRTHAMUNI'S
**SATTARKADIPAVALI**

SRIJAYATIRTHAMUNI'S
**TATVAPRAKAASHIKAA**

SRI TRIVIKRMAPANDITAACHARYA'S
**TATVAPRADIPA**

# BHAVADIPA

**Sri Vedavyasa's Brahmasutra,**
**Sri Madhvacharya's Bhashya,**
**Teekas - Sattarkadipawali, Tatvapradipa, Tatvaprakaashikaa**

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries & overall critisism**

**Published by :**

**Sri Gurusarvabhouma Samshodhana Mandira,**
Jagadguru Srimanmadhvacharya Mula Mahasamsthana,
Sri Raghavendraswamy Mutt, Mantralayam - 518 345 A.P.

'BHAVADIPA' : HH Sri Sri Subhudendra Thirta sripada has submitted this 7th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya,

Bangalore. Ph : 9141495120

First Edition : 2015

Price : Rs. 600

Copies : 1000





Type set :

Smt. S. Nagalatha, Bangalore.
Sri Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ॥ ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvaprakaashikaa**

**Tatvapradipa**

# BHAVADIPA

******

**President:**

**HH Sri Subhudhendratirtha Sripadaru**

**PeeTadhipati of Sri Raghavendraswamy Mutt,**
**Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

## ಏಳನೆಯ

# ವಾಙ್ಮಯ-ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ
ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು
ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ
ಅಂತರ್ಯಾಮಿಗಳಾದ ಶ್ರೀಮನ್ ಮೂಲರಾಮಚಂದ್ರದೇವರಿಗೆ ಈ ಕೃತಿಯನ್ನು
ಏಳನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿದ್ದಾರೆ.

|| ಶ್ರೀಮನ್‌ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಏಳನೆಯ ಸಂಪುಟದ ಮೂಲಕ ಸಮನ್ವಯಾಧ್ಯಾಯದ ಪ್ರಾರಂಭದ ಮೂರು ಪಾದಗಳ ಅನುವಾದ ಕಾರ್ಯವು ಮುಕ್ತಾಯವಾಗಿ, ನಾಕನೆಯ ಪಾದದ ಆನುಮಾನಿಕಾಧಿಕರಣವು ಇದರಲ್ಲಿ ಪ್ರಾರಂಭವಾಗಿದೆ. ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಸಮನ್ವಯಕ್ಕಾಗಿ ಪ್ರಥಮಪಾದವು ಹೊರಟಿದೆ. ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳ ಸಮನ್ವಯಕ್ಕಾಗಿ ಎರಡನೆಯ ಪಾದವು ಹೊರಟಿದೆ. ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯಕ್ಕಾಗಿ ಮೂರನೆಯ ಪಾದವು ಹೊರಟಿದೆ. ಹೀಗೆ ವೇದದಲ್ಲಿರುವ ಎಲ್ಲಾ ಶಬ್ದಗಳ ಸಮನ್ವಯವನ್ನು ಈ ಮೂರು ಪಾದಗಳಿಂದ ಸಾಧಿಸಿದ್ದಾಯಿತು.

ಮೊದಲೆರಡು ಪಾದಗಳಲ್ಲಿ ಯಾವ ಯಾವ ಶಬ್ದಗಳನ್ನು ಸಮನ್ವಯ ಮಾಡಲಾಯಿತೊ ಅದೇ ಶಬ್ದಗಳ ಸಮನ್ವಯವನ್ನು ಪುನಃ ಮೂರನೆಯ ಪಾದದಲ್ಲಿ ಮಾಡುತ್ತಿದ್ದಾರೆಂಬ ಅಪೂರ್ವ ಪ್ರಮೇಯವನ್ನು ಚಂದ್ರಿಕಾಚಾರ್ಯರು ಹಾಗೂ ರಾಯರು ತಿಳಿಸಿದ್ದಾರೆ. ಏಕೆಂದರೆ ಲೋಕದಲ್ಲಿ ಪ್ರಸಿದ್ಧವಾದ ನಾಮಾತ್ಮಕಶಬ್ದಗಳನ್ನು ಹಾಗೂ ಲಿಂಗಾತ್ಮಕಶಬ್ದಗಳನ್ನು ವಿಷ್ಣುವಿನಲ್ಲಿ ಮೊದಲೆರಡು ಪಾದಗಳಲ್ಲಿ ಸಮನ್ವಯ ಮಾಡಲಾಯಿತು. ಆಗ ಆ ಶಬ್ದಗಳೆಲ್ಲವೂ ಉಭಯತ್ರಪ್ರಸಿದ್ಧವಾದವು. ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿವೆ. ಶಾಸ್ತ್ರದೃಷ್ಟಿಯಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ.

ಆದ್ದರಿಂದ ಹೀಗೆ ಉಭಯತ್ರಪ್ರಸಿದ್ಧವಾದ ಎಲ್ಲ ಶಬ್ದಗಳ ಸಮನ್ವಯವನ್ನು ಪುನಃ ಈ ಮೂರನೆಯ ಪಾದದಲ್ಲಿ ಸಾಧಿಸಲಾಯಿತು. ಯಾವಾಗ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಕೂಡ ಶ್ರೀಹರಿಯಲ್ಲಿ ಸಾಧಿಸಲಾಗುತ್ತದೋ, ಆಗ ಸಕಲಶಬ್ದಗಳು ಶ್ರೀಹರಿಯನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ. ಬೇರೆ ಯಾರನ್ನು ಕೂಡ ಪ್ರತಿಪಾದನೆ ಮಾಡುವುದಿಲ್ಲ. ಎಂಬ ಬ್ರಹ್ಮಮೀಮಾಂಸಶಾಸ್ತ್ರದ ಮುಖ್ಯಪ್ರಮೇಯವು ಸಿದ್ಧವಾಗುತ್ತದೆ. ಆದ್ದರಿಂದ ಮೂರನೆಯ ಪಾದವು ಹೊರಡದಿದ್ದರೆ ಮೊದಲೆರಡು ಪಾದಗಳ ಸಮನ್ವಯ ಮಾಡಿದ ಶಬ್ದಗಳಿಗೆ ಸಾರ್ಥಕ್ಯವೇ ಕೂಡುವುದಿಲ್ಲ. ಆದ್ದರಿಂದ ತೃತೀಯಪಾದದ ಅಧ್ಯಯನವು ಅತ್ಯಾವಶ್ಯಕವಾಗಿದೆ.

ಈ ಪಾದದಲ್ಲಿ ದೇವತಾಧಿಕರಣ, ಅಪಶೂದ್ರಾಧಿಕರಣಗಳನ್ನು ಬಿಟ್ಟು ಉಳಿದೆಲ್ಲ ಅಧಿಕರಣಗಳು ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡುತ್ತಿವೆ. ಈ ಎರಡು ಅಧಿಕರಣಗಳು ಯಾವುದೇ ಶಬ್ದಗಳನ್ನು ಸಮನ್ವಯ ಮಾಡದೆ ಪ್ರಾಸಂಗಿಕವಾಗಿ ದೇವತೆಗಳಿಗೆ ವೇದವಿದ್ಯಾಧಿಕಾರವಿದೆ. ಹಾಗೂ ಸ್ತ್ರೀ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂಬೆರಡು ಪ್ರಮೇಯಗಳನ್ನು ಸಾಧಿಸಲು ಹೊರಟಿವೆ.

ಸಕಲ ದೇವತೆಗಳು ಮನುಷ್ಯರಾಗಿ ಸಾಧನೆ ಮಾಡಿಕೊಂಡು ಅನಂತರ ದೇವತಾಪದವಿಯನ್ನು ಪಡೆಯುತ್ತಾರೆಂಬ ಅಪೂರ್ವಪ್ರಮೇಯವು ನಮಗೆ ದೇವತಾಧಿಕರಣದಿಂದ ತಿಳಿಯುತ್ತಿದೆ. ಆದ್ದರಿಂದ ಜಗತ್ತಿನಲ್ಲಿ ಯಾರೇ ಒಬ್ಬ ವ್ಯಕ್ತಿಯನ್ನು ನಾವು ತಿರಸ್ಕಾರ ಭಾವದಿಂದ ನೋಡಬಾರದು. ಅವನು ದೇವತಾಪುರುಷನೂ ಆಗಿರಬಹುದು. ಹೀಗೆ ವ್ಯವಹಾರ ಪ್ರಪಂಚದಲ್ಲಿ ನಾವು ನಡೆದುಕೊಳ್ಳುವ ಕ್ರಮವನ್ನು ಕೂಡ ಈ ಅಧಿಕರಣಗಳಿಂದ ತಿಳಿಯಲು ಸಾಧ್ಯವಿದೆ.

ಅಪಶೂದ್ರಾಧಿಕರಣದಲ್ಲಿ 'ಸತ್ಯವನ್ನು ಹೇಳುವವನೇ ನಿಜವಾದ ಬ್ರಾಹ್ಮಣನು. ಸುಳ್ಳನ್ನು ಹೇಳಿದರೆ ಅವನು ಶೂದ್ರನಾಗುತ್ತಾನೆ' ಎಂಬ ಅಪೂರ್ವ ಪ್ರಮೇಯವನ್ನು ತಿಳಿಸಿದ್ದಾರೆ. ಸಮಸ್ತ ಜಗತ್ತಿನಲ್ಲಿ ನಿಜವಾದ ಧರ್ಮದ ಪರಿಪಾಲನೆ ಎಂದರೆ ಸತ್ಯದ ರಕ್ಷಣೆಯ ಹೊರತು ಬೇರೆ ಮತ್ತೇನೂ ಅಲ್ಲ. ನಮ್ಮ ಲೌಕಿಕ ಜೀವನದಲ್ಲಿ ತಿಳಿಯಬೇಕಾದ ಈ ಮುಖ್ಯ ಪ್ರಮೇಯವನ್ನು ಅಪಶೂದ್ರಾಧಿ-ಕರಣದಿಂದ ತಿಳಿಯಬೇಕು.

ನಾವು ಕಾಣುತ್ತಿರುವ ಈ ಜಗತ್ತು ಪ್ರತಿಕ್ಷಣವು ಅತ್ಯಂತ ಕ್ರಿಯಾಶೀಲವಾಗಿ ನಡೆಯುತ್ತಿದೆ. ಸಮಸ್ತ ಜಗತ್ತಿನಲ್ಲಿರುವ ಈ ಕ್ರಿಯಾಶೀಲತೆಯನ್ನು ನಿಯಮನ ಮಾಡುತ್ತಿರುವವನು ಯಾರು? ಎಂಬ

ಕುತೂಹಲಕ್ಕೆ ಕಂಪನಾಧಿಕರಣವು ಉತ್ತರಿಸುತ್ತಿದೆ. ವಜ್ರಶಬ್ದವನ್ನು ಸಮನ್ವಯ ಮಾಡುವ ಮೂಲಕ ಸಮಸ್ತ ಜಗತ್‌ಚೇಷ್ಟಕನಾದವನು ಶ್ರೀಹರಿಯೇ ಆಗಿದ್ದಾನೆ ಎಂಬ ಪ್ರಮೇಯವನ್ನು ನಮ್ಮ ಅರಿವಿಗಾಗಿ ತಿಳಿಸುತ್ತಿದೆ.

ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ಎಂದೂ ಆರದ ಜ್ಯೋತಿ ಬೆಳಗುತ್ತಿದೆ. ಇದನ್ನು ಕೆಲವರು ಜೀವ ಎಂದು ಕರೆಯಬಹುದು. ಆದರೆ ಆ ಜೀವದ ಒಳಗಡೆ ಕುಳಿತು ಜೀವನಿಗೂ ಜ್ಯೋತಿಪ್ರದನಾದವನು ಮಹಾವಿಷ್ಣುವೇ ಆಗಿದ್ದಾನೆ. ಆದ್ದರಿಂದ ನಮ್ಮ ಹೃದಯದಲ್ಲಿ ಬೆಳಗುತ್ತಿರುವ ಜ್ಯೋತಿ ಪರಮಾತ್ಮನೆಂದೇ ಉಪಾಸನೆಗೈಯಬೇಕೆಂಬ ನಮ್ಮ ಅನುಷ್ಠಾನಪ್ರಮೇಯವನ್ನು ಜ್ಯೋತಿರಧಿಕರಣವು ಬಿತ್ತರಿಸುತ್ತಿದೆ.

ಅಪ್ರಾಕೃತ ಶರೀರಿಯಾದ ಮಹಾವಿಷ್ಣು ಪ್ರಾಕೃತವಾದ ನಾಮರೂಪಗಳಿಂದ ಅತೀತನಾಗಿದ್ದಾನೆ. ಆದ್ದರಿಂದಲೇ ಎಲ್ಲೆಡೆಯು ಏಕೈಕನಾಗಿ ಪ್ರಕಾಶಿಸುತ್ತಿದ್ದಾನೆ. ನಮ್ಮ ನಿಮ್ಮಂತೆ ಆಕೃತಿ ನಾಮ ಮೊದಲಾದವುಗಳಿಂದ ಅವನು ಕೂಡಿರುವುದಿಲ್ಲ. ಆದ್ದರಿಂದಲೇ ಅವನನ್ನು ಆಕಾಶ ಎಂದು ಛಾಂದೋಗ್ಯೋಪನಿಷತ್ತು ಕರೆಯುತ್ತಿದೆ. ಭಗವಂತನನ್ನು ಹೀಗೆ ಅತ್ಯಂತ ಲೋಕವಿಕ್ಷಣನನ್ನಾಗಿ ತಿಳಿಯಬೇಕೆಂಬ ಪ್ರಮೇಯವನ್ನು ತಿಳಿಸಲು ಆಕಾಶಾಧಿಕರಣವು ಹೊರಟಿದೆ.

ಬೆಳಿಗ್ಗೆ ಎದ್ದ ಕೂಡಲೇ 'ನಾನು ಸ್ವಪ್ನವನ್ನು ಕಂಡೆ. ನನಗೆ ಇಂದು ಸ್ವಪ್ನ ಬೀಳಲೇ ಇಲ್ಲ'. ಇತ್ಯಾದಿಯಾಗಿ ನಾವು ವ್ಯವಹರಿಸುತ್ತೇವೆ. ಆದರೆ ಸ್ವಪ್ನವನ್ನು ಸೃಷ್ಟಿ ಮಾಡಿದವರು ನಾವಲ್ಲ. ಸ್ವತಂತ್ರವಾಗಿ ನೋಡುವವರು ನಾವಲ್ಲ. ನೋಡದಿದ್ದರೂ ನೋಡಿದ್ದೇವೆಂಬ ಅಹಂಕಾರವುಳ್ಳವರು ಮಾತ್ರ ನಾವಾಗಿದ್ದೇವೆ. ಏಕೆಂದರೆ ಸ್ವಪ್ನವನ್ನು ಸೃಷ್ಟಿ ಮಾಡುವ ಪರಮಾತ್ಮನೇ ಸ್ವಪ್ನವನ್ನು ನೋಡುವವನಾಗಿದ್ದಾನೆ. ಸ್ವಪ್ನಪದಾರ್ಥಗಳನ್ನು ಸೃಷ್ಟಿ ಮಾಡಿ ಅಸಂಗನಾಗಿದ್ದುಕೊಂಡು ತೈಜಸರೂಪಿಯಾದ ಭಗವಂತನು ಆ ಸ್ವಪ್ನಪದಾರ್ಥಗಳನ್ನು ಮುಖ್ಯವಾಗಿ ತಾನೇ ಕಾಣುತ್ತಾನೆಂಬ ಅಪೂರ್ವ ಪ್ರಮೇಯಗಳನ್ನು ತಿಳಿಸಲು ಸುಷುಪ್ತ್ಯಧಿಕರಣವು ಹೊರಟಿದೆ.

ಕೊನೆಯದ್ದು ಬ್ರಾಹ್ಮಣಾಧಿಕರಣ. ವೇದದಿಂದ ಪ್ರತಿಪಾದ್ಯನಾಗಿ ಜ್ಞಾನಗಮ್ಯನಾದ ಪರಮಾತ್ಮನೊಬ್ಬನೇ 'ಬ್ರಾಹ್ಮಣ' ಎಂದು ಕರೆಸಿಕೊಳ್ಳುತ್ತಾನೆ. ಚತುರ್ಮುಖಬ್ರಹ್ಮನನ್ನು ಕೆಲವು ವೇದಗಳು 'ಬ್ರಾಹ್ಮಣ' ಎಂದು ಕರೆದಿರುವಂತೆ ಕಾಣಸುತ್ತದೆ. ಆದರೆ ಅವನಿಗೂ ಬ್ರಾಹ್ಮಣ್ಯವನ್ನು

ನೀಡಿದ ಮಹಾಬ್ರಾಹ್ಮಣನೆಂದರೆ ಮಹಾವಿಷ್ಣುವೇ ಹೊರತು ಬೇರಾರೂ ಅಲ್ಲ. ಬ್ರಾಹ್ಮಣ ಶಬ್ದಕ್ಕೆ 'ಬ್ರಹ್ಮಣಾ ಅಣ್ಯತೇ' ಎಂಬ ವ್ಯುತ್ಪತ್ತಿಯಿಂದ ವೇದದಿಂದ ಗಮ್ಯನಾದವನು ಎಂದರ್ಥ.

ಹೀಗೆ ಲೌಕಿಕಜೀವನದಲ್ಲಿ ನಾವು ಅನುಷ್ಠಾನಕ್ಕೆ ತಂದುಕೊಳ್ಳಬೇಕಾದ ಅನೇಕ ಮಾರ್ಮಿಕ-ವಿಚಾರಗಳನ್ನು, ತಾತ್ತ್ವಿಕವಿಚಾರಗಳನ್ನು ಬ್ರಹ್ಮಮೀಮಾಂಸಾಶಾಸ್ತ್ರವು ನಮಗೆ ತಿಳಿಸಿಕೊಡುತ್ತಿದೆ.

ಏಳನೆಯ ಸಂಪುಟವನ್ನು ಅತ್ಯಂತ ಶ್ರದ್ಧೆಯಿಂದ ಬರೆದು ನೀಡಿದ ವಿದ್ವಾನ್ ಚೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ಶ್ರೀಮನ್ ಮೂಲರಘುಪತಿರಾಮಚಂದ್ರದೇವರು ಹಾಗೂ ಹರಿವಾಯುಗುರುಗಳು ವಿಶೇಷ ಅನುಗ್ರಹವನ್ನು ಮಾಡಿ ಇನ್ನು ಹೆಚ್ಚಿನ ಅನುವಾದ ಕಾರ್ಯದ ಸಾಮರ್ಥ್ಯವನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-
ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್ಮೂಲರಘುಪತಿ -
ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# Brahmasutra Bhashya
# With
# Select Commentaries including
# Bhavadipa of Sri Raghavendra Tirtha

*By*

**Vachaspati Dr. V. R. Panchamukhi**

At the outset, I would like to express our sincere respectful danda pranams, to His Holiness Sri Subudhendra Tirtha for his encouragement to publish this Series of Volumes on Sutra Bjhashya, Tatvaprakasika, and other commentaries with Focus on Bhavadipa, with Kannada Translations.

We would also express our gratitude to Mahamahopadhyaya, Pandita Kesari, Vidwan Sri Raja .S. Giri Acharya, for his guidance, support and encouragement in the finalisation of the different Volumes.

The present Volume is concerned with the the last seven Adhikaranas of the Third Pada and the First Adhikarana of the Fourth Pada of the First Adhyaya.

As done in the other Volumes, Vidwan Venkateshacharya has provided translations, with critical notes and discussions, of other commentaries on Sutra Bhashya, such as Sattarkadipavali, Tatva prakasika, Tatvapradipa, along with the Translation of Bhavadipa of Sri Raghavendra Swamigalu. He has also given the account of Tantradipika of Sri Raghavendra Tirtha, whenever necessary.

The present Volume - Volume No. 7. in the series of Volumes on Sri Madhva Bhashya and the Commentaries/Tippanis, thereupon, consists

of the Kannada Translation and Notes, pertaining to the following eight Adhikaranas:

1. *Devatadhikarana (the Eighth Adhikarana of the Third pada of the first Adhyaya);*
2. *Apashoodradhikarana, (the Ninth Adhikarana of the Third pada of the First Adhyaya);*
3. *Kampanadhikarana, (the Tenth Adhikarana of the Third Pada of the First Adhyaya);*
4. *Jyotiradhikarana (the Eleventh Adhikarana of the Third Pada of the First Adhyaya);*
5. *Akashadhikarana (the Twelfth Adhikarana of the Third Pada of the First Adhyaya);*
6. *Shusuptyadhikarana (The Thirteenth Adhikarana of the Third Pada of the First Adhyaya);*
7. *Brahmnadhikarana (the Fourteenth Adhikarana in the Third Pada of the First Adhyaya);*
8. *Aanumankadhikarana (the First Adhikarana of the Fourth Pada of the First Adhyaya).*

Thus, this Seventh Volume deals with, eight Adhikaranas, in Total - the first seven being the Adhikarana of the Third Pada, while the remaining One Adhikarana, belonging to the Foruth Pada of the First Adhyaya.

Vidwan Sri Bemmatti Venkateshacharya, has covered the detailed explanations given in all the commentaries stated above, in the sequential manner. He has very competently presented the main arguments of Purvapaksha and Siddhanta, and has upheld the superiority of Siddhanta of Madhvacharya, as the final interpretation.

Sri Venkateshacharya, presents, in a succinct manner, the summaries of arguments, developed in the different Adhikaranas listed above.

In order to facilitate the understanding of the main themes dealt with in the different Brahmasutras, covered in this Volume, I have ven-

tured to present brief English Translations of the Brahmasutras. These translations are based upon one of my earlier Books, published by Rashtriya Sanskrita Vidyapeetha, (deemed University) Tirupati.

**Devataadhikarna**

।। तदुपर्यपि बादरायणः सम्भवात् ।।

Badarayana opines that it is not only the human beings but also the divine entities who are obviously above the human beings, that are entitled to perform Upasana, acquire knowledge and perform deeds because they have all the faculties such as special intellect required for this purpose.

।। विरोधः कर्मणीति चेन्नानेकप्रतिपत्तेर्दर्शनात् ।।

The state of subordinate gods can be attained by the eligible human-beings through special deeds and Yajnas. But if in the very early stage nobody had attained this state, then the question is whom would the deeds and Yajnas be addressed to. Without anybody in the seat of particular gods, the deeds to be performed by the human beings, addressed to the Gods may have to be regarded as futile. We cannot argue like this because at any stage someone or the other would have attained some status of Godhood in the hierarchy of gods.

।। शब्द इति चेन्नातः प्रभवात्प्रत्यक्षानुमानाभ्याम् ।।

One may argue that at sometime there won't be any gods, and as such Vedas would be addressing to some non-existent entities, and that the statements made in the Vedas are futile and baseless. This is not correct. That the Gods are continually existent is confirmed by the statements available in the Vedas, by the clear perception of the great men and also by the use of deductive logic.

।। अत एव च नित्यत्वम् ।।

Since the Shabdas (words) are eternal, the continuity of gods explained in the Vedas has also to be accepted as eternal.

।। समाननामरूपत्वाच्चावृत्तावप्यविरोधो दर्शनात्स्मृतेश्च ।।

Even though those who occupy some positions of the gods get emancipated in due course of time, there would be many others who take their turn to occupy those positions and possess the same names and same characteristics. Hence the statements made in the Vedas cannot be regarded as baseless and untrue, there are many statements in the Srutis and in the Smrtis which corroborate these points.

।। मध्वादिष्वसम्भवादनधिकारं जैमिनिः ।।

Jaimini believes that in regard to some lores (vidyas) like madhu Vidya, Jyotistoma Vidya, gods do not have the eligibility because gods do not aspire for fruits which can be achieved by such lores.

।। ज्योतिषि भावाच्च ।।

Jaimini also holds the view that the gods who have already acquired the knowledge of all the objects are not eligible for acquisition of further knowledge which is instrumental for achieving Moksha. The presumption here is that the gods who have the knowledge would have also acquired the knowledge relevant for achieving Moksha and hence there is no need for acquiring further knowledge.

।। भावं तु बादरायणोऽस्ति हि ।।

On the contrary, Badarayana holds the view that even gods, who have acquired knowledge, have eligibility to the lores such as Madhu Vidya Jyotistoma Vidya and also further knowledge. He believes that by such knowledge, gods would be able to realise some special exuberance in their Bliss in the Moksha. There is no conflict between the views of Jaimini and those of Badarayana becuase Jaimini refers to the knoweldge and to the fruit acquired there from, in which gods do not have interest.

**Apashudraadhikarna**

।। शुगस्य तदानादरश्रवणात्तदाद्रवणात्सूच्यते हि ।।

Shudras do not have the eligibility in the Vedic lores. Further, it should be noted that in the context of conversation between Raikwamuni

and Pautrayana Raja, the word Shudra is used not in the sense of the person of Shudra Varna but in the sense of one afflicted with great sorrow. Raikwa addressed Pautrayana as Shudra because Pautrayana was in a state of deep remorse on learning about the disrespect shown by the Hamsa.

।। क्षत्रियत्वावगतेश्चोत्तरत्र चैत्ररथेन लिङ्गात् ।।

The word Shudra in the context of conversation between Raikwa and Pautrayana cannot mean Shudra Varna because in the later portion it is clearly stated that Pautrayana possesses the special chariot drawn by Mules and from this one can infer that Pautrayana was a Kshatriya and not a Shdura.

।। संस्कारपरामर्शात्तदभावाभिलापाच्च ।।

The Vedas prescribe that for eligibility in learning the Vedic lores, one should have the Samskara of Upanayana. It is also stated in the Vedas that Shduras do not have such Samskaras.

।। तदभावनिर्धारणे च प्रवृत्तेः ।।

Gautama proceeds to perform the Upanayana Samskara for Satyakama only after he was convinced that Satyakama was not a Shudra. This clearly brings out that Upanayana Samskara cannot be performed for Shudras.

।। श्रवणाध्ययनार्थप्रतिषेधात्स्मृतेश्च ।।

Further there was clear statements in the Srutis which prohibit Shudras even the hearing of the Vedas and also learning and understanding their meaning. There are also similar evidences in the Smrtis.

**Kampanadhikarna**

।। कम्पनात् ।।

The entity referred to by the work Kampana is not the Vajrayudha as is commonly understood, but it means Lord Vishnu, because Kampana

means the regulator and activator of the Universe and this feature is applicable only to Lord Vishnu.

**Jyotiradhikarna**

।। ज्योतिर्दर्शनात् ।।

The word Jyotis appearing in Srutis should essentially mean Lord Vishnu and not Jiva because it is clearly specified in the Srutis that Vishnu himself is Jyotis. The word Jyotis considered here is the one which is known for its dual-meaning as Jiva and Vishnu (Ubhayatra Prasiddha).

**Akashadhikarna**

।। आकाशोऽर्थान्तरत्वादिव्यपदेशात् ।।

The word Akasha used in the Srutis, refers to Lord Brahma and not to the physical sky because in the same Sruti, Akasha is described to have features of not having name or form and of being Amrta and Brahma. These features are applicable only to Lord Vishnu.

**Shushuptyadhikarna**

।। सुषुप्त्युत्क्रान्त्योर्भेदेन ।।

The entity who perceives the Svapnas the objects in the dreams - is Lord Vishnu himself and not Jiva because the perceiver is described to have the feature of being totally detached (Asanga) and this feature is applicable only to Lord Vishnu. We cannot argue that Jiva and Vishnu are undifferentiated and hence both have the feature of undifferentiated and hence both in the Prakarana dealing with the topic of Sushupti (deep sleep) and that dealing with that jiva is closely embraced with the form of Vishnu called Prajna and thus Jiva and Vishnu are distinct from each other.

**Brahmnadhikarna**

।। पत्यादिशब्देभ्यः ।।

The word Brahma appearing in the Sruti refers to Lord Vishnu and not Chaturmukha Brahma because in the same Sruti Brahma is described

to be the commander of everything (Isa, Isana) supreme to everybody (Pati) and these features are applicable only to Lord Vishnu.

**Anumaanikadhikarna**

**।। आनुमानिकमप्येकेषामिति चेन्न शरीररूपकविन्यस्त गृहीतेर्दर्शयति च ।।**

The word Avyakta essentially (by Mukhya Vrtti) means Brahma and not Pradhana as assumed in some schools of thought, because there is clear evidence from the Srutis in this regard. It is because Lord Brahma called Avyakta resides as an inner motive force within the pradhana just as He resides inside all the bodies. Pradhana is also called as Avyakta in common parlance. Just as this wretched body of Jiva is subservient to the Supreme Lord residing in it, Pradhana is also under the control of the Lord Brhama called Avyakta.

**।। सूक्ष्मं तु तदर्हत्वात् ।।**

Only the entity which is very minute (Sokshma) is eligible to justify the essence of the meaning of the word Avyakta. i.e., unmanifest. Lord Vishnu alone has the capability of being microcosm and hence He alone can be called as Avyakta.

**।। तदधीनत्वादर्थवत् ।।**

All the word having Panchami Vibhakti indicating relative inferiority, are meaningful in the Lord Brhama because the features reflecting this inferiority are subservient to the Supreme Lord. Just as we often say that the King is victorious, even though the army subordinate to him was indeed victorious, in the same way we could meaningfully apply the words of inferiority substance to refer to the Supreme Lord.

**ज्ञेयत्वावचनाच्च ।।**

The words like Avyakta, Jiva etc mean Para Brahma by Mukya Vrtti (essential inference), and not Pradhana etc. because later in the same Sruti it is stated that Avyakta should be understood by all those desirous of

emancipation and that Pradhana etc. should be discarded. It is accepted that it is Lord Brahma who should be understood by all those desiring freedom from bondage.

।। वदतीति चेन्न प्राज्ञो हि ।।

We cannot argue that in some sruti it is stated that those who are desirous of Moksha could adore and meditate upon the entity which is adove the Mahattattwa and hence Avyakta-which is next in superiority to Mahat - is described to be the entity which should be understood by the Mumukshus. Because, even in that Sruti, Lord Vishnu is refferred to by the words Mahatam Para. Since Lord Vishnu is superior to every thing else. he is obviously superior to Mahattattwa.

।। प्रकरणात् ।।

In this Prakarana it is stated that one who performs Upasana of the entity described in it realises Vishnu Pada. In view of this, we could infer that Vishnu is the entity whose Upasana is prescribed here.

।। त्रयाणामेव चैवमुपन्यासः प्रश्नश्च ।।

In the relevant Chapter (Prakarana) Pradhana is not considered for explanation. Three themes descussed in that chapater of the Kathopanishad, in response to three questions of enquiry put forth by Nachiketa to Yama are concerned with the following :

i. Pacified mood of the father of Nachiketa.
ii. The lore of sacrificial fire leading to the heaven (Swargayagni Vidya) and
iii. Worshipping Lord Brahma.

Hence Avyakta does not mean Pradhana but Lord Brahma himself.

।। महद्वच ।।

The word Mahat though most commonly used to mean Mahattattwa, has essentially the meaning of Lord Brahma because the basic features

of being Great indicated by the word Mahat are essentially applicable to Lord Brahma and not to anybody else. In a similar way the word Avyakta essentially means Lord Brahma because the basic features reflected in the word Avyakta are applicable to Lord Brahma himself.

।। चमसवदविशेषात् ।।

The word Chamasa in its common usage, means the sacrificial vessel but its prime meaning is taken as head. The context of the debate on the prime meaning of the word Avyakta is also similar to this. Hence prime meaning of Avyakta would be lord Brahma and not Pradhana.

The Jijnasus are indeed grateful to Vidwan Sri Bemmatti Venkateshacharya, for preparing such an extremely useful Volume on Brahmasutra Bhashya, covering several Commentaries and providing good critical comparative discussions.

We pray the the scholar author continues his pains-taking exercise to complete all the Four Adhyayas of Brahmasutras, in a similar manner with useful details.

**Vachaspati Dr. V. R. Panchamukhi**
Chancellor, Sri Gurusarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

# ಮುನ್ನುಡಿ

ಸೂತ್ರಪ್ರಸ್ಥಾನದ ಮೇಲೆ ಮಂತ್ರಾಲಯಪ್ರಭುಗಳು ಅನೇಕ ಕೃತಿಗಳನ್ನು ರಚಿಸಿರುವರು.ಅವುಗಳಲ್ಲಿ ನೇರವಾಗಿ ಸೂತ್ರಕ್ಕೆ ತಂತ್ರದೀಪಿಕಾ, ಅಧಿಕರಣಗಳಿಗೆ ಸಂಬಂಧಪಟ್ಟಂತೆ ನ್ಯಾಯಮುಕ್ತಾವಳೀ, ಟೀಕಾಕೃತ್ಪಾದರ ತತ್ತ್ವಪ್ರಕಾಶಿಕಾಕ್ಕೆ ಭಾವದೀಪ, ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕೆಗೆ ಪ್ರಕಾಶ, ಅಣುಭಾಷ್ಯಕ್ಕೆ ತತ್ವಮಂಜರಿ, ನ್ಯಾಯಸುಧೆಗೆ ಪರಿಮಳ, ಹೀಗೆ ಅವು ಪ್ರಸಿದ್ಧವಾಗಿವೆ. ಇವುಗಳಲ್ಲಿ 'ಭಾವದೀಪ' ಎಂಬ ತತ್ತ್ವಪ್ರಕಾಶಿಕಾ ವ್ಯಾಖ್ಯಾನವು ಸರ್ವ ವಿದ್ವನ್ಮಾನ್ಯವಾಗಿದೆ. ಬಾಲಸಂಘಮಪಿ ಎಂಬ ಶ್ರೀಮದಾಚಾರ್ಯರ ಗ್ರಂಥದ ಹಿರಿಮೆ ಶ್ರೀಗುರುರಾಜರ ಈ ಗ್ರಂಥಕ್ಕೂ ಅವರ ಅನುಗ್ರಹದಿಂದ ಅನ್ವಯವಾಗುತ್ತದೆ. ಸೂತ್ರಗಳ ಅಂತರಂಗವನ್ನು ಅವರು ಇದರಲ್ಲಿ ಹೇಗೆ ಸ್ಫುಟಗೊಳಿಸುತ್ತಾರೆ ಎಂಬುದು ಅಧ್ಯೇತೃಗಳಿಗೆ ವೇದ್ಯವಾಗುತ್ತದೆ.

ಆದ್ದರಿಂದಲೇ ಗುರುಗಣಸ್ತವನಕಾರರಾದ ಶ್ರೀವಾದೀಂದ್ರತೀರ್ಥರು ಈಗ್ರಂಥದ ಬಗ್ಗೆ ಹೇಳುತ್ತಾ ತತ್ತ್ವಪ್ರಕಾಶಿಕಾಕ್ಕೆ ಅನೇಕ ವ್ಯಾಖ್ಯಾನಗಳು ಇದ್ದರೂ ಭಾಷ್ಯ ಹಾಗೂ ಟೀಕೆಯ ಹೃದಯವು ಸುಲಭವಾಗಿ ಪಂಡಿತರಿಗೆ ತಿಳಿದಿರಲಿಲ್ಲ. ಆದರೆ ಶ್ರೀಗುರುಸಾರ್ವಭೌಮರು ಭಾವದೀಪ ಎಂಬ ಅದ್ಭುತವಾದ ಟಿಪ್ಪಣಿಯನ್ನು ರಚಿಸಿದ ಮೇಲೆ ಅದು ಸುಲಭವಾಗಿ ತಿಳಿಯಲು ಸಾಧ್ಯವಾಯಿತು. ಮೊದಲು 'ತತ್ತ್ವಪ್ರಕಾಶಿಕಾ' ಎಂಬ ಯುವತಿಯು ಇತರರು ರಚಿಸಿದ ವ್ಯಾಖ್ಯಾನ ಎಂಬ ಬಟ್ಟೆಯಿಂದ ತನ್ನ ಶರೀರವನ್ನು ಪೂರ್ಣ ಮುಚ್ಚಿಕೊಳ್ಳಲು ಆಗದೇ ನಾಚಿಕೆಯಿಂದ ಪಂಡಿತರ ಮುಂದೆ ಬರದೇ ಅಡಗಿ ಕುಳಿತ್ತಿದ್ದಳು. ಶ್ರೀರಾಘವೇಂದ್ರತೀರ್ಥರು 'ತತ್ತ್ವಪ್ರಕಾಶಿಕಾ' ಎಂಬ ಹೆಣ್ಣಿಗೆ 'ಭಾವದೀಪ' ಎಂಬ ಪೀತಾಂಬರವನ್ನು ಉಡಿಸಿದಾಗ 'ತತ್ತ್ವಪ್ರಕಾಶಿಕಾ' ಎಂಬ ಯುವತಿಯು ವಿದ್ವಾಂಸರ ಮುಂದೆ ಧೈರ್ಯದಿಂದ ಓಡಾಡಿದಳು ಎಂದು ಹೃದಯಂಗಮವಾಗಿ ವರ್ಣಿಸಿರುತ್ತಾರೆ. ಕೆಲವರು ತತ್ತ್ವಪ್ರಕಾಶಿಕೆಯಲ್ಲಿ ಕೆಲವೊಂದು ದೋಷಗಳಿವೆ ಎಂದು ಆರೋಪ ಮಾಡುತ್ತಾರೆ. ಅಂಥವರಿಗೆ ದಿಟ್ಟ ಉತ್ತರವನ್ನು ನಾನು ಕೊಡುತ್ತೇವೆ ಎಂದು ಶ್ರೀಗುರುರಾಜರು ತಮ್ಮ ಭಾವದೀಪದಲ್ಲಿ ''ನೂತನೈರುದಿತಾ'' ಎಂಬ ಶ್ಲೋಕದಿಂದ ಅರ್ವಾಚೀನರು ಹೇಳುವ ಯಾವ ದೋಷವೂ ನಮ್ಮ ಟೀಕಾಕೃತ್ಪಾದರ ಗ್ರಂಥಕ್ಕೆ ಕೂಡುವುದಿಲ್ಲ ಎಂಬುದನ್ನು ನಾವು ಸಮರ್ಥಿಸುತ್ತೇವೆಂದು ಹೇಳಿರುತ್ತಾರೆ.

of being Great indicated by the word Mahat are essentially applicable to Lord Brahma and not to anybody else. In a similar way the word Avyakta essentially means Lord Brahma because the basic features reflected in the word Avyakta are applicable to Lord Brahma himself.

।। चमसवदविशेषात् ।।

The word Chamasa in its common usage, means the sacrificial vessel but its prime meaning is taken as head. The context of the debate on the prime meaning of the word Avyakta is also similar to this. Hence prime meaning of Avyakta would be lord Brahma and not Pradhana.

The Jijnasus are indeed grateful to Vidwan Sri Bemmatti Venkateshacharya, for preparing such an extremely useful Volume on Brahmasutra Bhashya, covering several Commentaries and providing good critical comparative discussions.

We pray the the scholar author continues his pains-taking exercise to complete all the Four Adhyayas of Brahmasutras, in a similar manner with useful details.

**Vachaspati Dr. V. R. Panchamukhi**
Chancellor, Sri Gurusarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

# ಮುನ್ನುಡಿ

ಸೂತ್ರಪ್ರಸ್ಥಾನದ ಮೇಲೆ ಮಂತ್ರಾಲಯಪ್ರಭುಗಳು ಅನೇಕ ಕೃತಿಗಳನ್ನು ರಚಿಸಿರುವರು.ಅವುಗಳಲ್ಲಿ ನೇರವಾಗಿ ಸೂತ್ರಕ್ಕೆ ತಂತ್ರದೀಪಿಕಾ, ಅಧಿಕರಣಗಳಿಗೆ ಸಂಬಂಧಪಟ್ಟಂತೆ ನ್ಯಾಯಮುಕ್ತಾವಳೀ, ಟೀಕಾಕೃತ್ಪಾದರ ತತ್ವಪ್ರಕಾಶಿಕಾಕ್ಕೆ ಭಾವದೀಪ, ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕೆಗೆ ಪ್ರಕಾಶ, ಅಣುಭಾಷ್ಯಕ್ಕೆ ತತ್ವಮಂಜರಿ, ನ್ಯಾಯಸುಧೆಗೆ ಪರಿಮಳ, ಹೀಗೆ ಅವು ಪ್ರಸಿದ್ಧವಾಗಿವೆ. ಇವುಗಳಲ್ಲಿ 'ಭಾವದೀಪ' ಎಂಬ ತತ್ವಪ್ರಕಾಶಿಕಾ ವ್ಯಾಖ್ಯಾನವು ಸರ್ವ ವಿದ್ವನ್ಮಾನ್ಯವಾಗಿದೆ. ಬಾಲಸಂಘಮಪಿ ಎಂಬ ಶ್ರೀಮದಾಚಾರ್ಯರ ಗ್ರಂಥದ ಹಿರಿಮೆ ಶ್ರೀಗುರುರಾಜರ ಈ ಗ್ರಂಥಕ್ಕೂ ಅವರ ಅನುಗ್ರಹದಿಂದ ಅನ್ವಯವಾಗುತ್ತದೆ. ಸೂತ್ರಗಳ ಅಂತರಂಗವನ್ನು ಅವರು ಇದರಲ್ಲಿ ಹೇಗೆ ಸ್ಫುಟಗೊಳಿಸುತ್ತಾರೆ ಎಂಬುದು ಅಧ್ಯೇತೃಗಳಿಗೆ ವೇದ್ಯವಾಗುತ್ತದೆ.

ಆದ್ದರಿಂದಲೇ ಗುರುಗಣಸ್ತವನಕಾರರಾದ ಶ್ರೀವಾದೀಂದ್ರತೀರ್ಥರು ಈಗ್ರಂಥದ ಬಗ್ಗೆ ಹೇಳುತ್ತಾ ತತ್ವಪ್ರಕಾಶಿಕಾಕ್ಕೆ ಅನೇಕ ವ್ಯಾಖ್ಯಾನಗಳು ಇದ್ದರೂ ಭಾಷ್ಯ ಹಾಗೂ ಟೀಕೆಯ ಹೃದಯವು ಸುಲಭವಾಗಿ ಪಂಡಿತರಿಗೆ ತಿಳಿದಿರಲಿಲ್ಲ. ಆದರೆ ಶ್ರೀಗುರುಸಾರ್ವಭೌಮರು ಭಾವದೀಪ ಎಂಬ ಅದ್ಭುತವಾದ ಟಿಪ್ಪಣಿಯನ್ನು ರಚಿಸಿದ ಮೇಲೆ ಅದು ಸುಲಭವಾಗಿ ತಿಳಿಯಲು ಸಾಧ್ಯವಾಯಿತು. ಮೊದಲು 'ತತ್ವಪ್ರಕಾಶಿಕಾ' ಎಂಬ ಯುವತಿಯು ಇತರರು ರಚಿಸಿದ ವ್ಯಾಖ್ಯಾನ ಎಂಬ ಬಟ್ಟೆಯಿಂದ ತನ್ನ ಶರೀರವನ್ನು ಪೂರ್ಣ ಮುಚ್ಚಿಕೊಳ್ಳಲು ಆಗದೇ ನಾಚಿಕೆಯಿಂದ ಪಂಡಿತರ ಮುಂದೆ ಬರದೇ ಅಡಗಿ ಕುಳಿತ್ತಿದ್ದಳು. ಶ್ರೀರಾಘವೇಂದ್ರತೀರ್ಥರು 'ತತ್ವಪ್ರಕಾಶಿಕಾ' ಎಂಬ ಹೆಣ್ಣಿಗೆ 'ಭಾವದೀಪ' ಎಂಬ ಪೀತಾಂಬರವನ್ನು ಉಡಿಸಿದಾಗ 'ತತ್ವಪ್ರಕಾಶಿಕಾ' ಎಂಬ ಯುವತಿಯು ವಿದ್ವಾಂಸರ ಮುಂದೆ ಧೈರ್ಯದಿಂದ ಓಡಾಡಿದಳು ಎಂದು ಹೃದಯಂಗಮವಾಗಿ ವರ್ಣಿಸಿರುತ್ತಾರೆ. ಕೆಲವರು ತತ್ವಪ್ರಕಾಶಿಕೆಯಲ್ಲಿ ಕೆಲವೊಂದು ದೋಷಗಳಿವೆ ಎಂದು ಆರೋಪ ಮಾಡುತ್ತಾರೆ. ಅಂಥವರಿಗೆ ದಿಟ್ಟ ಉತ್ತರವನ್ನು ನಾನು ಕೊಡುತ್ತೇವೆ ಎಂದು ಶ್ರೀಗುರುರಾಜರು ತಮ್ಮ ಭಾವದೀಪದಲ್ಲಿ ''ನೂತನೈರುದಿತಾ'' ಎಂಬ ಶ್ಲೋಕದಿಂದ ಅರ್ವಾಚೀನರು ಹೇಳುವ ಯಾವ ದೋಷವೂ ನಮ್ಮ ಟೀಕಾಕೃತ್ಪಾದರ ಗ್ರಂಥಕ್ಕೆ ಕೂಡುವುದಿಲ್ಲ ಎಂಬುದನ್ನು ನಾವು ಸಮರ್ಥಿಸುತ್ತೇವೆಂದು ಹೇಳಿರುತ್ತಾರೆ.

ಶ್ರೀಮದಾಚಾರ್ಯರ ಭಾಷ್ಯದ ಹೃದಯವನ್ನು ತಿಳಿಯಲು ಶ್ರೀಮಜ್ಜಯತೀರ್ಥರ ತತ್ತ್ವಪ್ರಕಾಶಿಕೆಯು ಬಹೂಪಕೃತವಾಗಿದ್ದರೂ, ಭಾಷ್ಯದ ಅಕ್ಷರ ಅರ್ಥವನ್ನು ತಿಳಿಯಲು ಶ್ರೀಗುರುಸಾರ್ವಭೌಮರ ಭಾವದೀಪಿಕೆಯು ಅತ್ಯಂತ ಮಹತ್ತಾದ ಸ್ಥಾನವನ್ನು ಪಡೆಯುತ್ತದೆ.

'ಭಾವದೀಪ' ಎಂಬ ಹೆಸರೇ ಹೇಳುವಂತೆ ಇದು ಭಾವನೆಯ ದೀಪಗಳು ಅಂದರೆ ಮೂಲಗ್ರಂಥಕಾರರ ಭಾವನೆಗಳಿಗೆ ದೀಪವಿದ್ದಂತೆ, ಶಾಸ್ತ್ರವಾರಿಧಿಯಲ್ಲಿ ತೇಲಾಡುವ ಜಿಜ್ಞಾಸುಗಳಿಗೆ ಅನೇಕ ವಿಚಾರಗಳಲ್ಲಿ ಗೊಂದಲವು ಉಂಟಾಗುವುದು ಸಹಜ ಅಂತಹ ಗೊಂದಲ ನಿವಾರಣೆಯ ದಾರಿದೀಪ ಈ ನಮ್ಮ ಗುರುರಾಜರ 'ಭಾವದೀಪ'. ಟೀಕೆಯಲ್ಲಿ ಉದಾಹರಿಸಿದ ಕೃತಿ, ಉಪನಿಷತ್ತು, ಸೂತ್ರ, ವ್ಯಾಕರಣಸೂತ್ರ, ಪುರಾಣವಚನಗಳ ಅಪೂರ್ಣತೆ ಕಂಡಲ್ಲಿ ಅದರ ಪೂರ್ಣಪಾಠವನ್ನು ಕೊಡುವ ಮಹದುಪಕಾರವನ್ನು ಗುರುಗಳು ಈ ಭಾವದೀಪದಲ್ಲಿ ತೋರಿಸಿದ್ದಾರೆ. ಪ್ರಕೃತ ಭಾವದೀಪದ ಕನ್ನಡ ಅನುವಾದವು ಈಗಾಗಲೇ ೬ ಸಂಪುಟಗಳನ್ನು ಕಂಡಿದೆ. ಇದರ ಅನುವಾದಕರು ನಮ್ಮ ಶ್ರೀಮಠದ ವಿದ್ವಾಂಸರಾದ ವಿದ್ವಾನ್ ಬೆಮತ್ತಿ ವೇಂಕಟೇಶಾಚಾರ್ಯರು, ಆಕಾರದಲ್ಲಿ ವಾಮನದಂತೆ ಇದ್ದರೂ ಸಾಧನೆಯಲ್ಲಿ ತ್ರಿವಿಕ್ರಮರು. ಇವರ ಅನುವಾದದ ಶೈಲಿಯಂತೂ ಅನನ್ಯ ಸ್ವಪ್ರಶಬ್ದಗಳಿಂದ ಟಿಪ್ಪಣಿಕಾರರ ಹೃದಯವನ್ನು ತಮ್ಮ ಬಿಚ್ಚುನುಡಿಗಳಲ್ಲಿ ತೆರೆದಿಡುವ ಇವರ ಜಾಣ್ಮೆ ಅಪರೂಪ. ನಾಕಂಡ ಯುವವಿದ್ವಾಂಸರಲ್ಲಿ ಇವರು ಒಂದು ವಿಶಿಷ್ಟಸ್ಥಾನವನ್ನು ಅಲಂಕರಿಸಿರುತ್ತಾರೆ. ಇವರ ಅನುವಾದಿತ ಕೃತಿಯಲ್ಲಿ ಈ ೭ನೇ ಸಂಪುಟವು ಪ್ರಥಮಾಧ್ಯಾಯದ ಎಂಟು ಅಧಿಕರಣಗಳಿಂದ ಯುಕ್ತವಾಗಿದೆ. ೧. ದೇವತಾಧಿಕರಣ, ೨. ಅಪಶೂದ್ರಾಧಿಕರಣ, ೩. ಕಂಪನಾಧಿಕರಣ, ೪ ಜ್ಯೋತಿರಧಿಕರಣ, ೫. ಆಕಾಶಾಧಿಕರಣ, ೬. ಸುಷುಪ್ತ್ಯಾಧಿಕರಣ, ೭. ಬ್ರಾಹ್ಮಣಾಧಿಕರಣ, ೮. ಆನುಮಾನಿಕಾಧಿಕರಣ.

ಮೇಲೆ ಪ್ರಸಕ್ತವಾದ ಎಂಟು ಅಧಿಕರಣಗಳಲ್ಲಿ ವಿವರಿಸಿದ ಭಾವದೀಪದ ವಿಚಾರವನ್ನು ಸ್ಪಷ್ಟವಾಗಿ ಅನುವಾದಿಸುವುದರೊಂದಿಗೆ ೭ನೇ ಭಾಗದ ಭಾವದೀಪದಲ್ಲಿ ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಳಿ ಹಾಗೂ ಶ್ರೀತ್ರಿವಿಕ್ರಮಪಂಡಿತರ ತತ್ತ್ವದೀಪಾ ಎಂಬ ಕೃತಿಯ ಅನುವಾದವು ಸುಂದರವಾಗಿ ಮೂಡಿಬಂದಿದೆ. ಇದರ ಅಧ್ಯಯನದಿಂದ ಶ್ರೀಗುರುರಾಜರ ಭಾವದೀಪಗ್ರಂಥದ ಪೂರ್ಣಜ್ಞಾನವಾಗುವುದರಲ್ಲಿ ಎರಡನೆಯ ಮಾತಿಲ್ಲ. ಈ ಎರಡು ನುಡಿಗಳನ್ನು ಗುರುಗಳ ಮೂಲಕ ಭಗವಂತನಿಗೆ ಸಮರ್ಪಿಸುತ್ತಿದ್ದೇನೆ.

ವಿ|| ಎನ್. ವಾದಿರಾಜಾಚಾರ್ಯರು
ಪ್ರಾಂಶುಪಾಲರು, ಗುರುಸಾರ್ವಭೌಮ ವಿದ್ಯಾಪೀಠ,
ಮಂತ್ರಾಲಯ.

# ನಾಕು ದೀಪಗಳ ಬೆಳಕಿನಲ್ಲಿ
# ಮೂರು ಪಾದಗಳು

ಏಳನೆಯ ಸಂಪುಟ ಬರೆದು ಮುಗಿಸಿದಾಕ್ಷಣ ನನಗನಿಸಿದ್ದು ಹೀಗೆ - ......

"ಚಲಾವಣೆ ಇರುವಷ್ಟು ಕಾಲ ಹಣಕ್ಕೆ ಬೆಲೆ. ಚಲಾವಣೆ ಕಳೆದುಕೊಂಡ ಮೇಲೆ ಅದು ಕೇವಲ ಕಾಗದ ಅಥವಾ ಧಾತು. ಅದಕ್ಕೆ ಸಮಾಜದಲ್ಲಿ ಬೆಲೆಯಿಲ್ಲ. ಒಂದು ಗ್ರಂಥ ವಾಙ್ಮಯರೂಪದಲ್ಲಿ ಚಲಾವಣೆ ಪಡೆದುಕೊಂಡಾಗ ಮಾತ್ರ ....... ಅದು ನಮ್ಮಂತರಂಗದಲ್ಲಿ ಅಜರಾಮರ ಆಸೆ'ಯನ್ನು ಹುಟ್ಟಿಸಿ, ನಮ್ಮ ಬಾಳಿನ ಬೆಳಕಾಗುತ್ತದೆ !!!!!. ಇಲ್ಲದಿದ್ದರೆ .......... ಅದೂ ಕೂಡ ಒಂದು ಕಾಗದದ ಮೇಲೆ ಗೀಚಿದ ಅಕ್ಷರ ಮಾತ್ರ !!!!!!. ಬಹುಷಃ ಇದರಿಂದ ಹಾನಿಯೇ ಆದೀತು......ಅದು ಕೇವಲ ಬೆಳಕಲ್ಲ. ಬಾಳಿನ ಕತ್ತಲೂ ಆದೀತು..... !!!!"

''ಕಾಲೋ ಹ್ಯಯಂ ನಿರವಧಿಃ ವಿಪುಲಾ ಚ ಪೃಥ್ವೀ.........'' ಎಂಬ ಭವಭೂತಿಯ ಮಾತು ನೆನಪಾಗಿ ಸುಮ್ಮನಾದೆ.

೧. ಸಮಾಜದಲ್ಲಿ ಜ್ಞಾನ-ಅಜ್ಞಾನಗಳದ್ದೇ ಜಗಳ. ವಿವೇಕವಿಲ್ಲದೇ ಅಜ್ಞಾನವೇ ಗೆಲ್ಲುತ್ತಿದೆ. ಕಣ್ಣು ಬರೀ ಕನ್ನಡಿ...... ಕಾಲಿಗೆ ಕಣ್ಣಿಲ್ಲ ......... ಹೆಜ್ಜೆ ಇಟ್ಟದ್ದೇ ದಾರಿ, ಹಾಡಿದ್ದೇ ರಾಗ, ಕುಣಿದದ್ದೇ ನಾಟ್ಯ, ಬರೆದದ್ದೇ ಪ್ರಬಂಧ, ಕೂಡಿದ್ದೇ ಸಭೆ........

ಇವೆಲ್ಲಾ ನಮಗೇಕೆ ..... ?? ಅಜ್ಞಾನದ ಬಾಲಕ್ಕೇಕೆ ಜೋಲಬೇಕು .....??

ನರಳಾಟ, ಮರಳಾಟ, ಉರುಳಾಟ, ತಾಕಲಾಟಗಳ ಬಿರುಗಾಳಿಗೇಕೆ ಎದೆ ಉಬ್ಬಿಸಬೇಕು ......??

ದುರ್ವಿಚಾರವೆಂಬ ಪಕ್ಷಿ ಈಕ್ಷಿಸುತ್ತಿದೆ !! ಸದ್ವಿಚಾರವೆಂಬ ಗವಿಯ ಒಳಹೊಕ್ಕೋಣ....

ಇದು ಕೂಪಮಂಡೂಕದರ್ಶನವಲ್ಲ. ಅಣುವಿನಲ್ಲಿರುವ ವಿಶ್ವಶಕ್ತಿಯ ದರ್ಶನ..... ಪ್ರದರ್ಶನ..... ದಿವ್ಯದರ್ಶನ. ಇದುವೇ ಅನಂತದ ದರ್ಶನವೂ ಕೂಡ.

ಅವಿವೇಕ ಪ್ರಪಂಚವನ್ನು ಅಚ್ಚುಕಟ್ಟಾಗಿ ನಡೆಸುತ್ತಿರುವವನು ಶಿಸ್ತಿನ ಸಿಪಾಯಿ ಮಹಾವಿಷ್ಣು. ವಿವೇಕಿ ಪ್ರಪಂಚವನ್ನೂ ಕೂಡ ಆಳುತ್ತಿರುವವನೂ ಅವನೇ. ಅಂಥ ದೇವನಿಗೆ 'ವಜ್ರ' ಎಂಬ ಬಿರುದು ನೀಡಿತು ಈ ಸಂಪುಟದಲ್ಲಿರುವ ಕಂಪನಾಧಿಕರಣ.

೨. ಕೆಲವರು ಬದುಕು ಸುಂದರವೆಂದರು. ಕೆಲವರು ಸಾವು ಸುಂದರವೆಂದರು. ಎರಡೂ ಸುಂದರವಲ್ಲ...... ಅರಿವು ಸುಂದರ. ಅರಿವಿನ ಗರ್ಭದಲ್ಲಿರುವ ಸುಖವು ಸುಂದರ. ಕೊನೆ ಮೊದಲಿಲ್ಲದ ಸುಖದ ತಾಣ ಮತ್ತೂ ಸುಂದರ. ಇದರ ಯಜಮಾನ ಸುಂದಾತಿಸುಂದರ. ಎಲ್ಲ ಬೆಳಕುಗಳ ಕಾಂತಿ ಇವನೆದುರು ನಿಸ್ತೇಜ. ಇವನು ಮಹಾಸುಂದರನಷ್ಟೇ ಅಲ್ಲ ಮಹದಾನಂದನೂ ಕೂಡ, ಮಹಾಜ್ಯೋತಿಯೂ ಕೂಡ.

'ವಿಷ್ಣುರೇವ ಜ್ಯೋತಿಃ' 'ವಿಷ್ಣುರೇವ ಆನಂದಃ' ಹೀಗೆಂದಿತು ಮುಂದಿನ ಜ್ಯೋತಿರಧಿಕರಣ.

೩. ನಮ್ಮಂತರಂಗದಲ್ಲೇ ವಿಶ್ವಶಕ್ತಿ ಅಡಗಿದೆ. ಇದನ್ನು ಹೊರಜಗತ್ತಿನಲ್ಲೂ ಕಾಣಬೇಕು. ಸೌಜನ್ಯವೆಂಬ ಹೂ...... ಬುದ್ಧಿಯೆಂಬ ಪತ್ರ...... ಸತ್ಯವೆಂಬ ದೀಪ ......... ಪ್ರೀತಿಯೆಂಬ

ನೈವೇದ್ಯ...... ನೀಡಿದಾಗ ಹೃದಯಪುಂಡರೀಕದಲ್ಲಿ ಅಡಗಿದ ವಿಟ್ಠಲ ಎಲ್ಲೆಡೆಯೂ ಕಾಣುವನು. ಎಲ್ಲೆಡೆ ಕಾಣುವುದರಿಂದಲೇ ಇವನು ಆಕಾಶ. ಅದಕ್ಕಾಗಿಯೇ ಹೊರಟಿತು ಆಕಾಶಾಧಿಕರಣ.

೪. ನಿದ್ರೆಯಲ್ಲಿ ಕನಸು ಕಾಣುವುದುಂಟು....... ಎಚ್ಚರದಲ್ಲಿ ಕನಸು ಕಾಣುವುದುಂಟು..... ಎಚ್ಚರದಲ್ಲಿ ನಿದ್ರಿಸುವವನಿಗೆ ಕನಸು-ನನಸುಗಳ ವ್ಯತ್ಯಾಸ ತಿಳಿಸುವುದೆಂತು..... ?

ಕೆಲವರಿಗೆ ಸಂಪತ್ತಿನ ಕನಸು, ಕೆಲವರಿಗೆ ಕೀರ್ತಿಯ ಕನಸು. ಸಂಪತ್ತು ಹಾಗೂ ಕೀರ್ತಿಗಳು ಇಬ್ಬರು ತುಂಟ ಬಾಲೆಯರು. ತನ್ನನ್ನು ದೈನ್ಯದಿಂದ ಬೇಡುವವರ ಬಳಿ ಬರಲು ಈ ಬಾಲೆಯರಿಗೆ ಬಲು ಅಸಹ್ಯ.....

ತಿಳಿಗೇಡಿ ಸಾಹಸಿ ಹುಡುಗನಿಗೆ ಇವರು ವಶವಾಗುವರು !!! ಸಮಾಧಾನ ಚಿತ್ತದಿಂದ ಅಂತರಂಗದಲ್ಲಿ ಕರ್ತವ್ಯ ಪರಿಪಾಲಿಸುವವನನ್ನು ಈ ಬಾಲೆಯರು ಬಿಗಿದಪ್ಪುವರು. ಕರ್ತವ್ಯ ಪರಿಪಾಲಿಸದೇ ಕೀರ್ತಿಯ ಬೆನ್ನತ್ತಿದವರಿಗೆ ''ತಿರುಕನೊಬ್ಬ ಊರ ಹೊರಗೆ ಮುರುಕು ಧರ್ಮಶಾಲೆಯಲ್ಲಿ ಕನಸು ಕಂಡನು'' ಎಂಬಂತೆ ಮರೀಚಿಕೆ ಮಾತ್ರ.

''ಕನಸು ಕಾಣುವವನು ನಾನಲ್ಲ. ನನಸೂ ನನ್ನ ಸ್ವತ್ತಲ್ಲ'' ಎಂದು ಕೈಮುಗಿದು ಈಶನಲ್ಲಿ ಶರಣೆಂದವನೇ ನಿಜ ಸಾಹಸಿಗ.

ಎಲ್ಲರ ಕನಸುಗಳನ್ನು ಸೃಷ್ಟಿಸಿ, ಏಕೈಕನಾಗಿ ನೋಡುತ್ತಿರುವ ಮಹಾವ್ಯಕ್ತಿ ಆ ಪರಮಚೇತನ ಮಾತ್ರ. ಇದುವೇ ಸುಷುಪ್ತ್ಯಧಿಕರಣದ ಹೃದಯ.

೫. 'ಕೆಲವರಿಗೆ ಜಾತಿಯೇ ಹೆಚ್ಚು....... ಕೆಲವರಿಗೆ ಜಾತಿಯಿಲ್ಲವೆಂಬ ಹುಚ್ಚು.......' 'ನಾನು ಹೆಚ್ಚು.... ನೀನು ಹುಚ್ಚ .....' 'ದೀಪ ಹಚ್ಚುವ ಕೈಯಲ್ಲಿ ಸನಾತನ ಸಂಸ್ಕೃತಿಯ ದಹನವೇ ಹೆಚ್ಚು !!!' 'ನಾನು ಬ್ರಾಹ್ಮಣ...' 'ನಾನು ಬುದ್ಧ...' 'ನಾನು ಪ್ರಬುದ್ಧ...' 'ನಾನು ಸಂಪ್ರಬುದ್ಧ...' 'ನಾನು ಸುಸಂಪ್ರಬುದ್ಧಽಽಽಽ' 'ನಾನು ಸುಸುಸುಸುಸುಸಂಪ್ರಬುದ್ಧಽಽಽಽ'.

ಇಂಥದ್ದೇ ಗತ್ತಿನ ಸಾಮ್ರಾಜ್ಯವಿದು. ಆದರೆ ಬ್ರಾಹ್ಮಣನೇ ಇರಲಿ, ಬುದ್ಧನೇ ಇರಲಿ, ಸಿದ್ಧನೇ ಇರಲಿ, ಪ್ರಸಿದ್ಧನೇ ಇರಲಿ, ಒಳಗಣ್ಣು ತೆರೆಯದವ ಶುದ್ಧ ನಿರ್ಬುದ್ಧ. ಅಪ್ರಬುದ್ಧ.

ನಿಜವಾದ ಬ್ರಾಹ್ಮಣ ಎಂದರೆ....!! ಮಹಾವಿಷ್ಣು ಮಾತ್ರ. ಅವನೇ ಮಹಾಬ್ರಾಹ್ಮಣ. ಅವನೇ ಮಹಾಬುದ್ಧ, ಇದುವೇ ಕೊನೆಯ ಬ್ರಾಹ್ಮಣಾಧಿಕರಣದ ಸಾರ.

ಇಲ್ಲಿಗೆ ಮೊದಲ ಅಧ್ಯಾಯದ ಏಳು ಸಂಪುಟಗಳೆಂಬ ಶಿಶುಗಳ ಪ್ರಸವ ನಿರಾತಂಕವಾಯಿತು. ಏಳು ಹೆಣ್ಣುಮಕ್ಕಳ ಗರ್ಭ ಧರಿಸಿದ ಮೂರು ಪಾದಗಳೆಂಬ ಮಾತೆಯರು ಮಾನ್ಯರಾದರು... ನಾವು ಧನ್ಯರಾದೆವು.....

## ಶ್ರೀಸುಬುಧೇಂದ್ರತೀರ್ಥರು

ಪರಮಪೂಜ್ಯ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ಕಠಿಣ ಪರಿಶ್ರಮದಿಂದ ಏಳು ಶಿಶುಗಳನ್ನು ನಿಮ್ಮ ಉಡಿಯಲ್ಲಿ ತುಂಬಿರುವರು. ಈ ಕಂದಮ್ಮಗಳನ್ನು ತಟ್ಟಿ, ಮಲಗಿಸದೇ ಉಳಿಸಿ ಬೆಳೆಸಿದರೆ ಸಾಕು.

ಇಂದು ಮಾತ್ರ ನಿಮಗೆ ಇವು ಶಿಶುಗಳು. ಮುಂದೊಂದು ದಿನ ನೀವೇ ಇವರ ಶಿಶುಗಳು.

ಈ ಶಿಶುಗಳನ್ನು ಬೆಳೆಸುವುದೆಂದರೆ ಕಾಮಧೇನು ಕಲ್ಪವೃಕ್ಷಗಳನ್ನು ಬೆಳೆಸಿದಂತೆ.

ಅನಂತಕಾಲದ ತನಕ ನಿಮ್ಮ ಪೋಷಣೆಯೇ ಈ ಶಿಶುಗಳ ಗುರಿ.

ಪರಮಪೂಜ್ಯ ॥ ಶ್ರೀಪಾದಂಗಳವರ ವಿಚಾರವಂತಿಕೆ ಹೇಳತೀರದು. ಇವರು ಕೇವಲ ಹಂಸರಲ್ಲ. ರಾಯರ ಭಕ್ತರಲ್ಲಿ ಗುಣವನ್ನಷ್ಟೇ ಹೀರಿ, ಪರಮಹಂಸರಾಗಿರುವರು. ಬೇಕಾದ್ದನ್ನು ಸ್ವೀಕರಿಸಬಲ್ಲರು. ಬೇಡವಾದ್ದನ್ನು ಬಿಡಬಲ್ಲರು.

ಸಂಪ್ರದಾಯ ಬಿಟ್ಟು, ಹೊಸತನ್ನು ಹುಟ್ಟುಹಾಕಲಿಲ್ಲ. ಮಾಡಿದ್ದು ಹಳತು ಅಲ್ಲವೇ ಅಲ್ಲ. ಇವರಲ್ಲಿ ಇವರದ್ದೇ ಆದ ದಿವ್ಯ ಆತ್ಮಶಕ್ತಿಯಿದೆ.

ಶ್ರೀಗಳಲ್ಲಿ ಪಾಂಡಿತ್ಯದ ಶಾರ್ದೂಲವಿಕ್ರೀಡಿತವಿದ್ದರೂ ವಿದ್ಯೆಯ ವಿನಯವಿದೆ. ಬಿಡುವಿಲ್ಲದ ಕಾರ್ಯಗಳ ಪ್ರವಾಹವಿದೆ.

ಶ್ರೀಗಳವರನ್ನು ನೋಡಿ ಹಲವರು ಪುಂಖಾನುಪುಂಖವಾದ ಕಾರ್ಯಗಳ ಪ್ರವಾಹಕ್ಕೆ ಉಗಮಸ್ಥಾನ ಎಂದರು. ಕೆಲವರು ಭವ್ಯಮಂದಿರ ಎಂದರು. ಕೆಲವರು ಎಲ್ಲ ಅನುಕೂಲವಿರುವ ದಿವ್ಯ ಅರಮನೆ ಎಂದರು.

ಇವರಿಗೆಲ್ಲ ಶ್ರೀಗಳು "ಬಯಲಿಗಿಂತ ಚಿಕ್ಕದು" ಎಂದು ಉತ್ತರಿಸಿದರು.

ನಿಜವೆಂದರೆ ಬಯಲನ್ನೂ ಚಿಕ್ಕದು ಮಾಡಿದ ಉದ್ಯೋಗ ಶ್ರೀಗಳವರದ್ದು. ಎಲ್ಲರಿಗೂ ಕೊಟ್ಟು ಇವರು ದೊಡ್ಡವರಾದರು. ದೊಡ್ಡವರು ತಮಗಾಗಿ ಏನು ಇಟ್ಟುಕೊಳ್ಳುವುದಿಲ್ಲ. ಶ್ರೀಗಳು ಕೊಟ್ಟು ಶ್ರೀಮಂತರಾದರು. ನಾವು ತೆಗೆದುಕೊಂಡು ಧನ್ಯರಾದೆವು.

ಶ್ರೀಗಳಿಗೆ ಜ್ಞಾನದ ಓಟದ ಅವಸರವಿದೆ. ಆದರೂ ಪ್ರತಿಹೆಜ್ಜೆ ಬಲು ಅಚ್ಚುಕಟ್ಟು.

ಶ್ರೀಗಳಿಗೆ ನಿಂತೇ ಗೊತ್ತಿಲ್ಲ. ನಿರಂತರ ನಡೆಯುವ ನಡೆಗಾರರಿರುವರು. ಎದ್ದಾಗ..... ನಿಂತಾಗ ...... ಕುಳಿತಾಗ ...... ಮಲಗಿದಾಗಲೂ ನಡೆಯುತ್ತಲೇ ಇರುವವರು. ನಾವು ನಡೆಯುತ್ತಿದ್ದೇವೆಂದು ತಿಳಿದು ನಿಂತಲ್ಲೇ ನಿಂತಿರುವವರು. ಕುಳಿತಲ್ಲೇ ಕುಳಿತವರು. ನಮಗೆ ನಡೆದು ಗೊತ್ತಿಲ್ಲ. ಶ್ರೀಗಳಿಗೆ ನಿಂತು ಗೊತ್ತಿಲ್ಲ.

ಆದರೆ ಮುಂದೆ ನಡೆಯುವ ಹುಚ್ಚು ಹಂಬಲ ಮಾತ್ರ ನನಗಿದೆ. ಆದಕ್ಕಾಗಿ ಶ್ರೀಗಳೇ ಶಕ್ತಿ ತುಂಬಿ ''ನಡೆ ಮುಂದೆ..... ನಡೆ ಮುಂದೆ .....'' ಎಂದು ಹರಸಲಿ.

ಈಗ ಭಾವದೀಪ ಬೃಹತ್‌ಯೋಜನೆಯ ಭಾರವನ್ನು ಶ್ರೀಪಾದರು ವಿ|| ಎನ್. ವಾದಿರಾಜಾಚಾರ್ಯರಿಗೆ ಆಶೀರ್ವಾದಪೂರ್ವಕವಾಗಿ ವಹಿಸಿರುವರು. ಇನ್ನು ಮುಂದೆ ಇವರ ಮೂಲಕ ಮಿಂಚಿನ ವೇಗದಲ್ಲಿ ಈ ಯೋಜನೆ ಸಾಗಬೇಕೆಂದು ಶ್ರೀಗಳವರ ಮುತುವರ್ಜಿ. ಗುರುಸಾರ್ವಭೌಮವಿದ್ಯಾಪೀಠದ ಪ್ರಾಂಶುಪಾಲರಾದ ವಿ|| ಎನ್. ವಾದಿರಾಜಾಚಾರ್ಯರಿಗೆ ಅನಂತ ನಮಸ್ಕಾರಗಳು ಹಾಗೂ ಕೃತಜ್ಞತೆಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಅನುಕ್ರಮಣಿಕಾ

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ದೇವತಾಧಿಕರಣ

ಈ ಸಂಪುಟದಲ್ಲಿ ದೇವತಾಧಿಕರಣದಿಂದ ಪ್ರಾರಂಭಮಾಡಿ ಮೂರನೆಯ ಪಾದವು ಮುಗಿದು, ನಾಕನೆಯ ಪಾದದ ಅನುಮಾನಿಕಾಧಿಕರಣದ ವಿಷಯವು ಸೇರಿದೆ. ಮೂರನೆಯ ಪಾದವು ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯಕ್ಕಾಗಿ ಹೊರಟದೆ. ಇಂಥ ಪಾದದಲ್ಲಿ ದೇವತಾಧಿಕರಣವು ಹೇಗೆ ಸಂಗತವಾಗುತ್ತವೆಂಬುದನ್ನು ವಿಚಾರ ಮಾಡುವ ಮೂಲಕ ಸಮಗ್ರ ದೇವತಾಧಿಕರಣದ ಸಾರವನುನ ತಿಳಿಯೋಣ. ದೇವತಾಧಿಕರಣದಲ್ಲಿ ಯಾವುದೇ ಶಬ್ದಗಳನ್ನು ಸಮನ್ವಯ ಮಾಡುತ್ತಿಲ್ಲ. ಮುಂದಿನ ಅಪಶೂದ್ರಾಧಿಕರಣದಲ್ಲಿಯೂ ಯಾವುದೇ ಶಬ್ದವನ್ನು ಸಮನ್ವಯ ಮಾಡುತ್ತಿಲ್ಲ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ಈ ಎರಡು ಅಧಿಕರಣಗಳ ಕೃತ್ಯವೇನು? ಎಂದು ಸಾಮಾನ್ಯವಾಗಿ ಬರುವಂತಹ ಪ್ರಶ್ನೆ. ಆದರೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ದೊಡ್ಡ ಶಂಕಾಪಿಶಾಚಿಯು ಪ್ರಾಪ್ತವಾದಾಗ ಅದನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣವನ್ನು ಇಲ್ಲಿ ಉಲ್ಲೇಖಿಸುವುದು ಅತ್ಯಂತ ಅನಿವಾರ್ಯ.

ಹಿಂದಿನ ಅಧಿಕರಣದಲ್ಲಿ ಮನುಷ್ಯರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಸಮರ್ಥಿಸಿದರು. ಮನುಷ್ಯರಿಗೆ ಅಧಿಕಾರವಿದೆಯೆಂದು ಹೇಳಿದಾಗ, ದೇವತೆಗಳಿಗೆ ಅಧಿಕಾರವಿಲ್ಲವೇನು? ಎಂಬ ಪ್ರಶ್ನೆಯು ಹುಟ್ಟುತ್ತದೆ. ಅದಕ್ಕೆ ಉತ್ತರಿಸುವುದಕ್ಕಾಗಿ ದೇವತೆಗಳಿಗೆ, ಋಷಿಗಳಿಗೆ, ಗಂಧರ್ವ ಮೊದಲಾದವರೆಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಆದರೆ ತಿರ್ಯಕ್‌ಪ್ರಾಣಿಗಳಿಗೆ ಅಧಿಕಾರವಿಲ್ಲದಕಾರಣ ಮನುಷ್ಯರಿಗೆ ಅಧಿಕಾರವಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ. ಮನುಷ್ಯಪದವನ್ನು ಪ್ರಯೋಗಿಸಿದ್ದರಿಂದ ದೇವತೆಗಳಿಗೆ ಅಧಿಕಾರವಿಲ್ಲವೆಂದು ಸೂತ್ರಕಾರರ ಅಭಿಪ್ರಾಯವಲ್ಲ. ಬ್ರಹ್ಮವಿದ್ಯೆಯನ್ನು ಸಂಪಾದಿಸಲು ಯಾವ ವಿಶಿಷ್ಟಬುದ್ಧಿಯು ಆವಶ್ಯಕವೋ, ಅಂತಹ ವಿಶಿಷ್ಟಬುದ್ಧಿಯು ತಿರ್ಯಕ್ ಪ್ರಾಣಿಗಳಲ್ಲಿಲ್ಲದ ಕಾರಣ ಅವುಗಳಿಗೆ ಅಧಿಕಾರವಿಲ್ಲವೆಂಬುದು ಸೂತ್ರಕಾರರ ಹೃದಯ.

ಪ್ರಾಸಂಗಿಕವಾದ್ದರಿಂದ ಈ ವಿಷಯವನ್ನು ಇಲ್ಲಿಯೇ ಸಮರ್ಥಿಸಬೇಕು. ಆದ್ದರಿಂದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಜ್ಞಾನಾಧಿಕಾರವು ಯಾರಿಗೆಲ್ಲಾ ಇರುತ್ತದೆಂದು ವಿಚಾರ ಮಾಡಿದ್ದರಿಂದ ಅಲ್ಲಿಯೇ ಈ ಅಧಿಕರಣದ ಪ್ರಮೇಯವನ್ನು ವಿಚಾರಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಿದಂತಾಗುತ್ತದೆ. ಕೇವಲ ಜ್ಞಾನಾಧಿಕಾರದ ವಿಚಾರವಷ್ಟೇ

ಇಲ್ಲಿ ಪ್ರಸಕ್ತವಾಗಿಲ್ಲ. ಮನುಷ್ಯಪದದಿಂದ ವ್ಯಾವರ್ತ್ಯವಾದ ವಿಷಯ ಯಾವುದು ಎಂಬುದನ್ನು ಇಲ್ಲಿ ವಿಮರ್ಶಿಸಬೇಕಾಗಿದೆ. ಆದ್ದರಿಂದ ಮೂರನೇ ಅಧ್ಯಾಯದಲ್ಲಿ ಈ ಅಧಿಕರಣವನ್ನು ಹೇಳಬೇಕಾಗಿದ್ದರೂ ಪ್ರಾಸಂಗಿಕವಾದ್ದರಿಂದ ಇಲ್ಲಿಯೇ ಹೇಳಿರುತ್ತಾರೆ.

ಉದಾಹರಣೆ : ಭೋಕ್ತ್ರಧಿಕರಣದಲ್ಲಿ ಮುಕ್ತರಿಗೂ, ಪರಮಾತ್ಮನಿಗೂ ಭೇದವನ್ನು ಸಮರ್ಥನೆ ಮಾಡಿರುವುದರಿಂದ ನಾಲ್ಕನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಆದರೂ ಜೀವಾಭೇದವಿರುವುದರಿಂದ ಎಂಬ ಯುಕ್ತಿವಿರೋಧ ಪರಿಹಾರ ಮಾಡುತ್ತದೆಂಬ ಕಾರಣದಿಂದ ಎರಡನೆಯ ಅಧ್ಯಾಯದಲ್ಲೇ ಹೇಗೆ ಭೋಕ್ತ್ರಧಿಕರಣವನ್ನು ಸೇರಿಸಿದ್ದಾರೋ, ಅದರಂತೆ ಈ ದೇವತಾಧಿಕರಣವೂ ಸಹ ಇಲ್ಲಿಯೇ ಸಂಗತವಾಗುತ್ತದೆ ಹೊರತು, ಮೂರನೆಯ ಅಧ್ಯಾಯದಲ್ಲಲ್ಲ.

ವಿಚಾರ ಮಾಡಿದರೆ ಮೂರನೆಯ ಅಧ್ಯಾಯದಲ್ಲೂ ಸಹ ಇದು ಸಂಗತವಾಗುವುದಿಲ್ಲ. ಏಕೆಂದರೆ ಸಾಧನೆಯ ಬಗ್ಗೆ ಮಾತ್ರ ಮೂರನೆಯ ಅಧ್ಯಾಯವು ವಿಚಾರವನ್ನು ಪ್ರತಿಪಾದನೆ ಮಾಡಬೇಕು. ದೇವತೆಗಳ ಜ್ಞಾನಾಧಿಕಾರವು ಸಾಧನೆಯಲ್ಲಿ ಸೇರದಿದ್ದಾಗ ಅಲ್ಲಿಯೂ ಸಹ ಹೇಗೆ ಸಂಗತವಾಗುತ್ತದೆ? ಅಂತೂ ಯಾವುದೇ ಅಧ್ಯಾಯದಲ್ಲೂ ಈ ವಿಚಾರವೂ ಅಸಂಗತವೆಂದು ತಿಳಿಯುತ್ತಿರುವಾಗ ಪ್ರಸಕ್ತವಾದಾಗ ಪ್ರಾರಂಭದಲ್ಲೇ ಇದನ್ನು ಉಲ್ಲೇಖ ಮಾಡುವುದು ಹೆಚ್ಚು ಸ್ವರಸ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ದೇವತಾಧಿಕರಣಕ್ಕೆ ಅಸಾಂಗತ್ಯದೋಷವಿಲ್ಲವೆಂದು ತಿಳಿಯಬೇಕು.

ದೇವತಾ ಪದವಿಯು ನಿತ್ಯವಾದ್ದರಿಂದ ದೇವತೆಗಳಿಗೆ ಮೋಕ್ಷವೇ ಇರುವುದಿಲ್ಲ. ಆದ್ದರಿಂದಲೇ ಮುಮುಕ್ಷಾವೂ ಸಹ ಕೂಡುವುದಿಲ್ಲ. ಅಧಿಕಾರಿವಿಶೇಷಣವಾದ ಮುಮುಕ್ಷಾ ಎಂಬುದು ಇಲ್ಲದ ಕಾರಣ, ದೇವತೆಗಳು ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗುವುದಿಲ್ಲವೆಂದು ಸಂಶಯ ಬರುತ್ತದೆ. ಇದರ ಪರಿಹಾರಕ್ಕಾಗಿ ದೇವತಾಧಿಕರಣವು ಹೊರಟಿದೆ. ಅಂದರೆ ದೇವತೆಗಳ ಪದವು ನಿತ್ಯವಲ್ಲ. ಆದ್ದರಿಂದಲೇ ದೇವತೆಗಳು ಮೋಕ್ಷವನ್ನು ಬಯಸಲು ಬ್ರಹ್ಮಜ್ಞಾನವನ್ನು ಪಡೆಯಲೇ ಬೇಕು ಎಂದು ಈ ಅಧಿಕರಣವು ಸಮರ್ಥಿಸುತ್ತಿದೆ. ಈ ಅಧಿಕರಣವನ್ನು ಅಧ್ಯಯನ ಮಾಡಿದಾಗ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಆದ್ದರಿಂದ ದೇವತೆಗಳ ದೃಷ್ಟಿಯಿಂದ ಈ ಅಧಿಕರಣವು ಸಾರ್ಥಕ.

ನಮಗೂ ಸಹ ಈ ಅಧಿಕರಣವು ಸಾರ್ಥಕ. ಪರಮಾತ್ಮನು ಸರ್ವದೇವೋಪಾಸ್ಯನಾಗಿದ್ದಾನೆಂದು ಅವಶ್ಯವಾಗಿ ತಿಳಿಯಬೇಕು. ದೇವತೆಗಳಿಗೆ ಮೋಕ್ಷವೇ ಇಲ್ಲವೆಂದಾದರೆ, ಪರಮಾತ್ಮನನ್ನು ಉಪಾಸನೆ ಮಾಡಲಾರರು. ಆದ್ದರಿಂದ ದೇವತಾ ಪದವಿಯು ಅನಿತ್ಯವಾದ್ದರಿಂದ ಅವರಿಗೂ ಮೋಕ್ಷವಿರುತ್ತದೆಂದು ಈ ಅಧಿಕರಣದಲ್ಲಿ ಸಮರ್ಥಿಸಿದಾಗ, ದೇವತೆಗಳಿಂದ ಪರಮಾತ್ಮನು ಉಪಾಸ್ಯನೆಂದು ಸಿದ್ಧವಾಗುತ್ತದೆ. ಆವಾಗ 'ಸರ್ವದೇವೋಪಾಸ್ಯತ್ವ' ಎಂಬ ಧರ್ಮವನ್ನು ಪರಮಾತ್ಮನಲ್ಲಿ ತಿಳಿದಂತಾಗುತ್ತದೆ. ಈ ಜ್ಞಾನದ ಸಂಪಾದನೆಗಾಗಿ ದೇವತಾಧಿಕರಣವು ನಮಗೂ ಸಹ ಸಾರ್ಥಕವಾಗಿದೆ. ಮತ್ತು 'ವಿಶ್ವೇದೇವಾ ಉಪಾಸತೇ' ಇತ್ಯಾದಿ ಶ್ರುತಿಗಳ ಪ್ರಾಮಾಣ್ಯದ ಸಮರ್ಥನೆಯೂ ಸಹ ಈ ಅಧಿಕರಣದ ಮತ್ತೊಂದು ಉದ್ದೇಶ.

ಈ ಅಧಿಕರಣದಲ್ಲಿ ಶ್ರುತಿಗೆ ಯುಕ್ತಿಯಿಂದ ಅಪ್ರಾಮಾಣ್ಯದೋಷವು ಪ್ರಾಪ್ತವಾದರೆ, ಅದರ ಪರಿಹಾರವನ್ನೂ ಸಹ ಮಾಡುತ್ತಿದ್ದಾರೆಂದು ಹೇಳಿದಂತಾಯಿತು. ಆವಾಗ ಈ ಅಧಿಕರಣವು ಎರಡನೆಯ ಅಧ್ಯಾಯದಲ್ಲಿ ಸೇರಬೇಕಲ್ಲವೇ ಎಂಬ ಪ್ರಶ್ನೆ ಬರುತ್ತದೆ. ಆದರೆ ಹಿಂದಿನ ಅಧಿಕರಣದಿಂದ ಅವಾಂತರಸಂಗತಿಯಿರುವ ಪ್ರಯುಕ್ತ ಇದನ್ನು ಇಲ್ಲಿಯೇ ಸೇರಿಸಿದ್ದಾರೆ. ಹೊರತು, ಎರಡನೆಯ ಅಧ್ಯಾಯದಲ್ಲಿ ಇದನ್ನು ಸೇರಿಸಿಲ್ಲ. ಪೂರ್ವಮೀಮಾಂಸಕರು ವಿಶ್ವಜಿದಧಿಕರಣವನ್ನು ಪ್ರಥಮಾಧ್ಯಾಯದಲ್ಲಿ ಸೇರಿಸದೇ, ನಾಲ್ಕನೇ ಅಧ್ಯಾಯದಲ್ಲಿ ಸೇರಿಸಿದ್ದಾರೆ. ವಾಸ್ತವಿಕವಾಗಿ ಶ್ರುತಿಯ ಅಪ್ರಾಮಾಣ್ಯದೋಷವನ್ನು ಪರಿಹರಿಸುತ್ತಿರುವುದರಿಂದ ಪ್ರಥಮಾಧ್ಯಾಯದಲ್ಲೇ ಅದನ್ನು ಸೇರಿಸಬೇಕು. ಆದರೂ ಅವಾಂತರಸಂಗತಿಯಿದೆ ಎಂಬ

ಕಾರಣಕ್ಕೋಸ್ಕರ ನಾಕನೆಯ ಅಧ್ಯಾಯದಲ್ಲಿ ಹೇಗೆ ಸೇರಿಸಿದ್ದಾರೋ, ಅದರಂತೆ ದೇವತಾಧಿ- ಕರಣದಲ್ಲಿಯೂ ಅವಾಂತರಸಂಗತಿಯಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಸೇರಿಸದೇ ಪ್ರಥಮಾಧ್ಯಾಯದಲ್ಲೇ ಸೇರಿಸಿರುತ್ತಾರೆ.

ಪೂರ್ವಪಕ್ಷದ ಫಲ ಹೀಗಿದೆ - ಮುಂದೆ ಹೇಳುವಂತೆ ಕರ್ಮ ಹಾಗೂ ಶಬ್ದಗಳು ವಿರುದ್ಧವಾಗುವುದಾದರೆ, ಈ ವಿರೋಧ ಪರಿಹಾರಕ್ಕೋಸ್ಕರ ದೇವತೆಗಳು ಅನಾದಿನಿತ್ಯರೆಂದೇ ಒಪ್ಪಬೇಕು. ಅಂತಹ ದೇವತೆಗಳಿಗೆ ಮುಂದೆ ಹೇಳುವ ಪ್ರಕಾರ ಮೋಕ್ಷದಲ್ಲಿ ಅಪೇಕ್ಷೆಯೂ ಉಪಪನ್ನವಾಗುವುದಿಲ್ಲ. ಆದ್ದರಿಂದಲೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೂ ಸಹ ಕೂಡುವುದಿಲ್ಲ.

ಸಿದ್ಧಾಂತದ ಫಲ - ಒಂದು ವೇಳೆ ಇಂದ್ರಾದಿ ದೇವತೆಗಳಿಗೆ ಉತ್ಪತ್ತಿನಾಶಗಳು ಇರುವುದಾದರೆ, ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಕರ್ಮ ಹಾಗೂ ಶಬ್ದಗಳ ವಿರೋಧಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದಲೇ ಬಾಧಕವಿಲ್ಲದ ಕಾರಣ, ಉತ್ಪತ್ತಿನಾಶಗಳನ್ನು ದೇವತೆಗಳಿಗೆ ಹೇಳಬಹುದು. ಇಂತಹ ದೇವತೆಗಳಿಗೆ ನಿತ್ಯವಾದ ಮೋಕ್ಷ ಎಂಬ ಫಲದಲ್ಲಿ ಅಪೇಕ್ಷೆಯು ಉಪಪನ್ನವಾಗುತ್ತದೆ. ಆದ್ದರಿಂದಲೇ ಮೋಕ್ಷಫಲಕವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುತ್ತದೆಂಬುದು ಸಿದ್ಧಾಂತದ ಫಲ.

ಪೂರ್ವಪಕ್ಷ ಹೀಗಿದೆ - ದೇವತೆಗಳಿಗೆ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲ. ಏಕೆಂದರೆ ಇಂದ್ರಾದಿಪದವಿಗಳನ್ನು ಹೊಂದಿರುವಂತಹ ದೇವತೆಗಳಿಗೆ ಉತ್ಪತ್ತಿನಾಶಗಳು ಇದೆಯೋ, ಇಲ್ಲವೋ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಒಂದು ವೇಳೆ ಉತ್ಪತ್ತಿವಿನಾಶವಿದೆಯೆಂದು ಉತ್ತರಿಸಿದರೆ, ಇಂದ್ರಾದಿಪದವಿಗಳು ದೊರೆಯುವುದಕ್ಕಿಂತ ಮೊದಲು ಆಯಾ ಪದವಿಗಳಲ್ಲಿ ಯಾರೂ ಇರುವುದಿಲ್ಲ. ಆ ಸಮಯದಲ್ಲಿ ಮಾಡುವಂತಹ ಯಾಗಾದಿ ಕ್ರಿಯೆಗಳು ವ್ಯರ್ಥವಾಗುವ ಪ್ರಸಂಗ ಬರುತ್ತವೆ. ಇನ್ನು ಪದವಿಯಲ್ಲಿ ದೇವತೆಗಳಿಲ್ಲದ್ದರೂ ಆ ಚೇತನರು ನಿತ್ಯರಾದ್ದರಿಂದ ಅಂತಹ ಚೇತನನನ್ನು ವಿವಕ್ಷಿಸಿ ಯಾಗವನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಮನುಷ್ಯ ಮೊದಲಾದ ಶರೀರಗಳಲ್ಲಿದ್ದು ಸಾಧನೆಯನ್ನು ಮಾಡಿಕೊಂಡ ಮೇಲಷ್ಟೇ ದೇವತೆಗಳಿಗೆ ಪದವಿಯು ಪ್ರಾಪ್ತವಾಗುತ್ತದೆ. ಮನುಷ್ಯ ಮೊದಲಾದ ಶರೀರದಲ್ಲಿರುವ ವ್ಯಕ್ತಿಯನ್ನು ಕುರಿತು, ಯಾಗಮಾಡುವುದು ಸರ್ವಥಾ ಯುಕ್ತವಾಗುವುದಿಲ್ಲ. ಮತ್ತು ವೇದಮಂತ್ರಗಳಲ್ಲಿ ಆಯಾಪದವಿಗಳಿಂದ ವಿಶಿಷ್ಟರಾದ ದೇವತಾಶರೀರವುಳ್ಳ ವ್ಯಕ್ತಿಯನ್ನೇ ಉದ್ದೇಶಿಸಿ, ಯಾಗವನ್ನು ಮಾಡಬೇಕೆಂದು ಹೇಳಲಾಗಿದೆ.

ಪೂರ್ವಮೀಮಾಂಸಕರು ಹೇಳುವಂತೆ 'ಸೂರ್ಯಾಯ', 'ಇಂದ್ರಾಯ' ಮೊದಲಾದ ಚತುರ್ಥೀವಿಭಕ್ತ್ಯಂತವಾದ ಶಬ್ದವನ್ನೇ ದೇವತೆಯೆಂದು ಹೇಳಬೇಕು. ಶಬ್ದಗಳು ನಿತ್ಯವಾದ್ದರಿಂದ, ದೇವತೆಗಳೂ ಸಹ ನಿತ್ಯರಾಗುತ್ತಾರಲ್ಲವೇ? ಎಂಬ ಶಂಕೆಯೂ ಸಹ ತಪ್ಪುತ್ತದೆ. ಏಕೆಂದರೆ ಇತಿಹಾಸಪುರಾಣಾದಿಗಳಲ್ಲಿ ದೇವತೆಗಳ ಶರೀರವನ್ನು ಸ್ಪಷ್ಟವಾಗಿ ವರ್ಣಿಸಿರುತ್ತಾರೆ. ಅಭಿಮಾನ್ಯಧಿಕರಣದಲ್ಲಿಯೂ ದೇವತೆಗಳಿಗೆ ಶರೀರಾದಿಗಳಿವೆಯೆಂದು ಸಮರ್ಥಿಸಲಾಗಿದೆ. ಹೀಗಿರುವಾಗ ಶರೀರಾದಿಗಳಿಲ್ಲದ ಜಡಭೂತವಾದ ಶಬ್ದವನ್ನೇ ದೇವತೆಗಳೆಂದು ಹೇಳುವುದು ತಪ್ಪಾಗುತ್ತದೆ. ಇನ್ನು ಬ್ರಹ್ಮನನ್ನು ಉದ್ದೇಶಿಸಿ, ಯಾಗವನ್ನು ಮಾಡುವುದರಿಂದ ಅನಾದಿನಿತ್ಯನಾದ ಬ್ರಹ್ಮೋದ್ದೇಶಕವಾದ ಯಾಗಾದಿಗಳಿಗೆ ವೈಯರ್ಥ್ಯವಿಲ್ಲವೆಂದು ಹೇಳಬಹುದು. ಆದರೆ, ಸಕಲಕರ್ಮಗಳು ವೈಷ್ಣವಕರ್ಮಗಳೆಂದು ಹೇಳಿದರೆ, ಐಂದ್ರಕರ್ಮಕಯಾಗ, ಸೂರ್ಯಕರ್ಮಕಯಾಗವೆಂಬ ವಿಭಾಗವೇ ತಪ್ಪುತ್ತದೆ. ಆದ್ದರಿಂದ ದೇವತಾಪದವಿಗಳು ಅನಿತ್ಯವಾದಾಗ ಕರ್ಮವಿರೋಧ ದೋಷ ಬರುವುದಷ್ಟೇ ಅಲ್ಲದೇ, ಶಬ್ದವಿರೋಧದೋಷವೂ ಸಹ ಬರುತ್ತದೆ. ಅಂದರೆ ಅನಿತ್ಯರಾದ ದೇವತೆಗಳನ್ನು ನಿತ್ಯವಾದ ಶಬ್ದವು ಪ್ರತಿಪಾದಿಸಲು ಸಾಧ್ಯವಿಲ್ಲ.

## XXXII

ದೇವತೆಗಳು ಅನಿತ್ಯರಾದ್ದರಿಂದ ಮೋಕ್ಷವನ್ನು ಹೊಂದುತ್ತಾರೆ. ಮೋಕ್ಷಕ್ಕಾಗಿ ಅಧಿಕಾರಿವಿಶೇಷಣವಾದ 'ಮುಮುಕ್ಷು' ಎಂಬ ಧರ್ಮವು ದೇವತೆಗಳಲ್ಲಿ ಉಪಪನ್ನವಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳೂ ಸಹ ಅಧಿಕಾರಿಗಳಾಗಿದ್ದಾರೆಂದು ಸಿದ್ಧಾಂತಿಗಳು ಸಮರ್ಥಿಸಬೇಕು. ಆದರೆ ದೇವತೆಗಳು ಅನಿತ್ಯರಾದಲ್ಲಿ ಕರ್ಮವಿರೋಧ ಹಾಗೂ ಶಬ್ದವಿರೋಧ ಎಂಬೆರಡು ಪ್ರಧಾನ ದೋಷಗಳು ಬರುತ್ತವೆ. ಅನಿತ್ಯರಾದ ದೇವತೆಗಳು ಯಾವಾಗ ತಮ್ಮ ಪದವಿಯಲ್ಲಿ ಇರುವುದಿಲ್ಲವೋ, ಆ ಸಂದರ್ಭದಲ್ಲಿ ಮಾಡುವಂತಹ ಯಾಗಗಳಿಗೆ ವೈಯರ್ಥ್ಯದೋಷ ಬರುತ್ತದೆ. ಮತ್ತು ದೇವತೆಗಳಿಲ್ಲದಾಗ ತದ್‌ವಾಚಕಪದಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ.

ಕರ್ಮವಿರೋಧ ದೋಷವನ್ನು ಎರಡನೆಯ ಸೂತ್ರವು ಹೇಳುತ್ತಿದೆ. ಶಬ್ದವಿರೋಧ ದೋಷವನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಎರಡನೆಯ ಸೂತ್ರದಲ್ಲಿ ದೇವತಾಪ್ರವಾಹವು ನಿತ್ಯವಾದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲವೆಂದು ಪರಿಹಾರವನ್ನು ನೀಡುತ್ತದೆ. ಇದರಿಂದಲೇ ಶಬ್ದವಿರೋಧ ಪರಿಹಾರವನ್ನೂ ಸಹ ಮಾಡಿದಂತಾಗುತ್ತದೆ. ಏಕೆಂದರೆ ದೇವತಾಪ್ರವಾಹವು ನಿತ್ಯವಾದ್ದರಿಂದ, ನಿರಂತರವಾಗಿ ದೇವತೆಗಳು ತಮ್ಮ ಪದವಿಯಲ್ಲಿ ಇದ್ದೇ ಇರುತ್ತಾರೆಂದಂತಾಯಿತು. ಆವಾಗ ಶಬ್ದಕ್ಕೆ ಅಪ್ರಾಮಾಣ್ಯದೋಷಕ್ಕೂ ಸಹ ಅವಕಾಶ ಬರುವುದಿಲ್ಲ. ಹೀಗಿರುವಾಗ ಮೂರನೆಯ ಸೂತ್ರಕ್ಕೆ ಏನು ಸಾರ್ಥಕ್ಯ ? ಎಂಬುದು ಇಲ್ಲಿ ಪ್ರಾಸಂಗಿಕವಾಗಿ ಮಾಡಬೇಕಾದ ವಿಚಾರ.

ಎರಡನೆಯ ಸೂತ್ರವು ಕೇವಲ ದೇವತೆಗಳಿಗೆ ಉತ್ಪತ್ತಿಯಿಲ್ಲವೆಂದಷ್ಟೇ ಹೇಳುತ್ತಿದೆ. ಮೂರನೆಯ ಸೂತ್ರವು ನಾಶವಿಲ್ಲವೆಂದು ಹೇಳುತ್ತಿರುವುದರಿಂದ ಸಾರ್ಥಕವೆಂದು ಉತ್ತರಿಸಬೇಕು. ಹಾಗಾದಲ್ಲಿ ಎರಡು ಹಾಗೂ ಮೂರನೆಯ ಸೂತ್ರಗಳು ಒಟ್ಟಿಗೆ ಸೇರಿ, ಕರ್ಮವಿರೋಧ ಹಾಗೂ ಶಬ್ದವಿರೋಧಗಳೆರಡನ್ನೂ ಪರಿಹರಿಸುತ್ತಿವೆ ಎಂದೇ ಉತ್ತರಿಸಬೇಕಾಗುತ್ತದೆ. ಆವಾಗ ಎರಡನೆಯ ಸೂತ್ರದಲ್ಲಿ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿ 'ಶಬ್ದ' ಎಂಬ ಪದವು ವ್ಯರ್ಥವಾಗುತ್ತದೆ. ಈ ಶಂಕೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ವಾಸ್ತವಿಕವಾಗಿ ಎರಡೂ ಸೂತ್ರಗಳಲ್ಲಿಯೂ ಎರಡು ಬಗೆಯ ಸಮಾಧಾನಗಳನ್ನು ಹೇಳುತ್ತಿದ್ದಾರೆ. ಆದರೆ ಪ್ರಥಮ ಸೂತ್ರದಲ್ಲಿ ಮನುಷ್ಯರು ಸತ್ಕರ್ಮಗಳಿಂದ ದೇವತಾಪದವಿಯನ್ನು ಪಡೆಯುತ್ತಾರೆಂದು ಹೇಳಿದರು. ಆವಾಗ ಮನುಷ್ಯರಾಗಿರುವ ಸಂದರ್ಭದಲ್ಲಿ ದೇವತಾಪದವಿಯಲ್ಲಿ ಯಾರೂ ಇಲ್ಲವೆಂದಂತಾಯಿತು. ಆ ಸಂದರ್ಭದಲ್ಲಿ ಮಾಡುವಂತಹ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವಲ್ಲವೇ? ಎಂಬ ಕರ್ಮವಿರೋಧಾಶಂಕೆಗೆ ಎರಡನೆಯ ಸೂತ್ರವು ಉತ್ತರಿಸಿತು. ಇದರ ಮೇಲೆ ಉಪಜೀವ್ಯವಾದ ಶಬ್ದದವಿರೋಧವೂ ಪ್ರಾಪ್ತವಾಗುತ್ತದೆ. ಅಂದರೆ ದೇವತೆಗಳೇ ಇಲ್ಲದಿದ್ದಾಗ ಶಬ್ದವಾದರೂ ಸಹ ದೇವತೆಯನ್ನು ಹೇಗೆ ಪ್ರತಿಪಾದಿಸಲು ಸಾಧ್ಯ ? ಎಂಬ ಅಭ್ಯಧಿಕಾಶಂಕೆಗೆ ಮೂರನೆಯ ಸೂತ್ರವು ಹೊರಟಿದೆ. ಆದ್ದರಿಂದ ಆಕಾಂಕ್ಷಾಕ್ರಮದಿಂದ ಎರಡನೆಯ ಹಾಗೂ ಮೂರನೆಯ ಸೂತ್ರಗಳು ಉತ್ತರಿಸುತ್ತಿರುವುದರಿಂದ, ಎರಡೂ ಸೂತ್ರಗಳು ಸಾರ್ಥಕವಾಗಿವೆ. ಮತ್ತು ಎರಡನೆಯ ಸೂತ್ರದಲ್ಲಿರುವ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿರುವ 'ಶಬ್ದ' ಎಂಬ ಪದವೂ ಸಹ ಸಾರ್ಥಕವಾಗಿದೆ.

'ವಿರೋಧಃ ಕರ್ಮಣಿ ಇತಿ ಚೇನ್ನ ಅನೇಕಪ್ರತಿಪತ್ತೇರ್ದರ್ಶನಾತ್' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ ದೇವತೆಗಳು ತಮ್ಮ ಸ್ಥಾನಕ್ಕೆ ಬರುವ ಮೊದಲು ಆಯಾ ಪದವಿಯು ಶೂನ್ಯವಾಗಿರುವುದಿಲ್ಲ. ಮತ್ತೊಬ್ಬ ದೇವತೆ ಅಲ್ಲಿರುತ್ತಾನೆ. ಹೀಗೆ ದೇವತಾಪ್ರವಾಹವು ಅನಾದಿಯಾದ್ದರಿಂದ, ತದುದ್ದೇಶಕವಾದ ಕರ್ಮಗಳು ಎಂದೂ ಸಹ ನಿಷ್ಫಲಗಳಲ್ಲ ಎಂದು ಸಮರ್ಥಿಸಲಾಯಿತು. ಹೀಗೆ ಕರ್ಮವಿರೋಧವನ್ನಷ್ಟೇ ಎರಡನೆಯ ಸೂತ್ರವು ಪರಿಹಾರ ಮಾಡಿದೆ ಹೊರತು, ಶಬ್ದವಿರೋಧವನ್ನು ಪರಿಹಾರ ಮಾಡಿಲ್ಲ. ಶಬ್ದವಿರೋಧವನ್ನೂ ಸಹ ಕರ್ಮವಿರೋಧಪರಿಹಾರದಿಂದಲೇ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ದೇವತೆಗಳಿಗೆ ತಮ್ಮ ಸ್ಥಾನವು ಹೇಗೆ ಅನಿತ್ಯವಾಗಿದೆಯೋ,

ಆದರಂತೆ ಕರ್ಮಗಳೂ ಸಹ ಸ್ವರೂಪತಃ ಅನಿತ್ಯವಾಗಿವೆ. ಆದರೆ ದೇವತಾಪ್ರವಾಹವು ಅನಾದಿನಿತ್ಯವಾಗಿದೆ. ಆದರಂತ ಕರ್ಮಪ್ರವಾಹವೂ ಸಹ ಅನಾದಿನಿತ್ಯವಾಗಿದೆ. ಇದರಂತೆ ಶಬ್ದದಲ್ಲಿ ಹೇಳಲಾಗದು. ವೇದರೂಪವಾದ ಶಬ್ದವು ಸ್ವರೂಪತಃ ನಿತ್ಯವಾಗಿದೆ. ಪ್ರವಾಹತಃ ನಿತ್ಯತ್ವವನ್ನು ಕರ್ಮದ ವಿಷಯದಲ್ಲಿ ಹೇಳಬಹುದೇ ಹೊರತು, ಶಬ್ದದ ವಿಷಯದಲ್ಲಿ ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದಲ್ಲಿ ಪುರಾಣಾದಿಗಳಿಗೂ ವೇದಕ್ಕೂ ಪೌರುಷೇಯತ್ವ , ಅಪೌರುಷೇಯತ್ವ ಎಂಬ ವ್ಯತ್ಯಾಸವನ್ನೇ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವರೂಪತಃ ನಿತ್ಯವಾದ ಇಂದ್ರಾದಿಸೂಕ್ತಗಳು ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನು ಇರುವುದಿಲ್ಲವೆಂದು ಸಿದ್ಧವಾಗಿದೆ. ಹಾಗಾಗಿ ಕರ್ಮವಿರೋಧವು ಪರಿಹಾರವಾದರೂ ಶಬ್ದವಿರೋಧವು ಹಾಗೆಯೇ ಉಳಿಯುತ್ತದೆ.

ಇದರ ಪರಿಹಾರಕ್ಕಾಗಿ 'ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬ ಮೂರನೆಯ ಸೂತ್ರವು ಹೊರಟಿದೆ. ಇಂದ್ರಾದಿಸೂಕ್ತಗಳಿಗೆ ಇಂದ್ರಾದಿ ಪದವಿಯಲ್ಲಿರುವ ವ್ಯಕ್ತಿಯಲ್ಲಷ್ಟೇ ತಾತ್ಪರ್ಯವಿರುತ್ತದೆ. ಯಾವರೀತಿಯಾಗಿ ಮಂತ್ರಿ ಎಂಬ ಒಂದೇ ಪದವು ಬೇರೆ ಬೇರೆ ಕಾಲದಲ್ಲಿ ಆ ಮಂತ್ರಿಸ್ಥಾನವನ್ನು ಹೊಂದುವ ಎಲ್ಲಾ ವ್ಯಕ್ತಿಗಳನ್ನು ಪ್ರತಿಪಾದನೆ ಮಾಡುತ್ತವೋ, ಆದರಂತೆ ಇಂದ್ರಾದಿಸೂಕ್ತಗಳು ಆಯಾ ಪದವಿಯಲ್ಲಿ ಬರುವ ಇಂದ್ರಾದಿದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆ. ಹಾಗಾಗಿ ಮೂರನೆಯ ಸೂತ್ರ ಹೊರಟದ್ದು ಸಾರ್ಥಕ. ಎರಡನೆಯ ಸೂತ್ರದಿಂದಲೇ ಇದು ಗತಾರ್ಥವಾಗುವುದಿಲ್ಲ.

ದೇವತೆಗಳಿಗೆ ನಿತ್ಯತ್ವವನ್ನು ಹೇಳುವುದು ಅನಿವಾರ್ಯ. ಏಕೆಂದರೆ ವೇದದಲ್ಲಿ ಒಂದೇ ಬಗೆಯ ನಾಮರೂಪಗಳಿಂದ ಇಂದ್ರಾದಿಸೂಕ್ತಗಳು, ಇಂದ್ರಾದಿದೇವತೆಗಳನ್ನು ಪ್ರತಿಪಾದಿಸುತ್ತಿವೆ. ಬೇರೆ ಬೇರೆ ಕಲ್ಪದಲ್ಲಿರುವ ಆಯಾದೇವತೆಗಳಿಗೆ ಒಂದೇ ರೂಪ ಹಾಗೂ ನಾಮಗಳು ಬರಲು ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಿಗೆ ತಮ್ಮ ಪದವಿಯು ನಿತ್ಯವೆಂದು ಹೇಳಬೇಕು. ಸೂರ್ಯಾದಿ ದೇವತೆಗಳು ಪರಮಾತ್ಮನಿಂದ ಹುಟ್ಟಿದ್ದಾರೆ ಇತ್ಯಾದಿಯಾಗಿ ಕೆಲವು ಶ್ರುತಿಗಳು ಪ್ರತಿಪಾದನೆ ಮಾಡುತ್ತಿರಬಹುದು. ಆದರೆ ಪ್ರಳಯಕಾಲದಲ್ಲಿ ತಮ್ಮ ವ್ಯಾಪಾರದಿಂದ ವಿಶ್ರಮಿಸಿದ ಸೂರ್ಯಾದಿದೇವತೆಗಳಿಗೆ ಪುನಃ ಪರಮಾತ್ಮನು ಸೃಷ್ಟಿಕಾಲದಲ್ಲಿ ಆಯಾವ್ಯಾಪಾರದಲ್ಲಿ ತೊಡಗುವಂತೆ ಪ್ರೇರಣೆ ಮಾಡಿದನೆಂದಷ್ಟೇ ಆ ಶ್ರುತಿಯ ಅಭಿಪ್ರಾಯವಾಗಿರುತ್ತದೆ. ಆದ್ದರಿಂದ ಸಕಲ ದೇವತೆಗಳೂ ಆಯಾ ಪದವಿಗಳಿಂದ ವಿಶಿಷ್ಟರಾಗಿ ಅನಾದಿನಿತ್ಯರಾಗಿದ್ದಾರೆಂದು ಅನಿವಾರ್ಯವಾಗಿ ಒಪ್ಪಬೇಕು. ದೇವತಾಪದವಿಯು ನಿತ್ಯವಾದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರಬೇಕಾಗಿರುವುದಿಲ್ಲ. ತಮ್ಮ ಪದವಿಯು ನಿತ್ಯವಾದ ಮೇಲೆ ಮೋಕ್ಷವು ದೊರೆಯುವುದಿಲ್ಲವೆಂದು ಖಚಿತವಾಗಿರುತ್ತದೆ. ಹೀಗಿರುವಾಗ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ದೇವತೆಗಳು ಹೊಂದುವುದಿಲ್ಲ.

ಮತ್ತು ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವೂ ಸಹ ಇಲ್ಲ. ಏಕೆಂದರೆ 'ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾ' ಎಂಬುದಾಗಿ ಯಾರು ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡುತ್ತಾರೋ ಅವರಿಗೆ ವಸು ಮೊದಲಾದ ಪದವಿಗಳು ದೊರೆಯುತ್ತವೆಂದು ಫಲವನ್ನು ಶ್ರುತಿಯು ಹೇಳಿದೆ. ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ದೊರೆತದ್ದರಿಂದ ಪುನಃ ಅದೇ ಫಲಕ್ಕೋಸ್ಕರ ಅವರು ಆಯಾವಿದ್ಯೆಗಳನ್ನು ಅಭ್ಯಾಸ ಮಾಡುವುದು ಕೂಡುವುದಿಲ್ಲ. ಇನ್ನು ಮೋಕ್ಷಫಲಕ್ಕೋಸ್ಕರ ಮಧುವಿದ್ಯಾದಿಗಳನ್ನು ಅಭ್ಯಾಸ ಮಾಡಬೇಕು. ಆದರೆ 'ನೈವ ದೇವಪದಂ ಪ್ರಾಪ್ಯ ಬ್ರಹ್ಮದರ್ಶನವರ್ಜಿತಾಃ' ಇತ್ಯಾದಿ ವಾಕ್ಯಗಳಿಂದ ದೇವತೆಗಳು ಈಗಾಗಲೇ ಬ್ರಹ್ಮಜ್ಞಾನಿಗಳಾಗಿರುತ್ತಾರೆ. ಹೀಗಿರುವಾಗ ಪುನಃ ಬ್ರಹ್ಮಜ್ಞಾನಕ್ಕೋಸ್ಕರ ಬ್ರಹ್ಮವಿದ್ಯೆಯಲ್ಲಿ ತೊಡಗುವುದು ಸರ್ವಥಾ ಕೂಡುವುದಿಲ್ಲ.

ಅನುಮಾನಸ್ವರೂಪಗಳನ್ನು ಹೀಗೆ ತಿಳಿಯಬೇಕು -

೧. ದೇವಾಃ ವೇದವಿದ್ಯಾದಿಷು ಅನಧಿಕಾರಿಣಃ ತತ್ ಫಲೇ ಮೋಕ್ಷೇ ಅರ್ಥಿತಾಶೂನ್ಯತ್ವಾತ್.

೨. ದೇವಾಃ ಅರ್ಥಿತಾಶೂನ್ಯಾಃ ಮೋಕ್ಷಾಭಾವನಿಶ್ಚಯವತ್ವಾತ್.

೩. ದೇವಾಃ ಮೋಕ್ಷಾಭಾವನಿಶ್ಚಯವಂತಃ ಪದವೀವಿಶಿಷ್ಟಾನಾಂ ತೇಷಾಂ ಅನಾದಿನಿತ್ಯತ್ವಾತ್.

ಇತ್ಯಾದಿ ಅನುಮಾನಗಳಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು. ಏಕೆಂದರೆ ಬ್ರಹ್ಮವಿದ್ಯೆಯ ಫಲವಾದ ಮೋಕ್ಷದಲ್ಲಿ ಅರ್ಥಿತ್ವವಿಲ್ಲವೆಂದು, ಮೋಕ್ಷವಿಲ್ಲವೆಂದು ನಿಶ್ಚಯವಾಗಿರುವುದರಿಂದ ಅರ್ಥಿತ್ವವಿಲ್ಲವೆಂದು ತಮ್ಮ ಪದವಿಗಳು ಅನಾದಿನಿತ್ಯವಾದ್ದರಿಂದ ಮೋಕ್ಷವಿಲ್ಲವೆಂದು ನಿರ್ಣಯವಾಗುತ್ತದೆ.

ಈಗಿರುವ ಅನೇಕ ಪಶುಪಕ್ಷಿಗಳಲ್ಲಿ ವೇದವನ್ನು ಓದುವಂತಹ ಸಾಮರ್ಥ್ಯವಿರುವುದಿಲ್ಲ. ಆದರಂತೆ ದೇವತೆಗಳಿಗೆ ಸಾಮರ್ಥ್ಯವಿಲ್ಲವೆಂದು ಹೇಳಲಾಗದು. ವೇದವಿದ್ಯೆಯನ್ನು ಅಭ್ಯಾಸ ಮಾಡಲು ದೇವತೆಗಳು ಸಮರ್ಥರೇ ಆಗಿದ್ದಾರೆ. ಮತ್ತು ಶೂದ್ರರು, ಸ್ತ್ರೀಯರು, ಬ್ರಹ್ಮಬಂಧುಗಳು ವೇದವನ್ನು ಓದಬಾರದೆಂದು ಹೇಗೆ ನಿಷೇಧವಚನವಿದೆಯೋ, ಆದರಂತೆ ದೇವತೆಗಳು ವೇದವನ್ನು ಓದಬಾರದೆನ್ನಲು ಯಾವುದೇ ನಿಷೇಧವಾಕ್ಯಗಳಿರುವುದಿಲ್ಲ.

ತಮ್ಮ ಪದವಿಗಳೆಲ್ಲವೂ ಅನಿತ್ಯವಾದುದು. ಮುಂದೆ ಮೋಕ್ಷವನ್ನು ದೇವತೆಗಳು ಪಡೆಯಲೇ ಬೇಕು. ಆದ್ದರಿಂದ ಮುಕ್ತಿಯ ವಿಷಯದಲ್ಲಿ ಅರ್ಥಿತ್ವವೂ ಸಹ ದೇವತೆಗಳಿಗೆ ಇದ್ದೇ ಇರುತ್ತದೆ. ಹಾಗಾದರೆ ದೇವತೆಗಳು ಅನಿತ್ಯರಾದರೆ, ಶಬ್ದವಿರೋಧ ಹಾಗೂ ಕರ್ಮವಿರೋಧಗಳು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಹಿಂದಿನ- ಮುಂದಿನ ಕಲ್ಪಗಳಲ್ಲಿರುವ ಎಲ್ಲ ದೇವತೆಗಳ ನಾಮ ಹಾಗೂ ರೂಪಗಳು ಒಂದೇ ರೀತಿಯಾಗಿರುವುದರಿಂದ ಶಬ್ದವಿರೋಧ ಮತ್ತು ಕರ್ಮವಿರೋಧಗಳಿಗೆ ಅವಕಾಶವಿಲ್ಲ.

ಹೀಗೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆನ್ನಲು ಯಾವುದೇ ಬಾಧಕಗಳಿರುವುದಿಲ್ಲ. ಮತ್ತು ಶ್ರುತಿಗಳಲ್ಲಿ ಸ್ಪಷ್ಟವಾಗಿ ಅಧಿಕಾರವಿದೆಯೆಂಬ ಮಾತೇ ಹೆಚ್ಚಾಗಿ ಕೇಳಿಸುತ್ತದೆ.

ಆದ್ದರಿಂದ ವೇದವಿದ್ಯೆಯ ಅಧಿಕಾರಕ್ಕೆ ಉಪಯೋಗಿಯಾದ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಎಂಬ ಮೂರೂ ಧರ್ಮಗಳು ದೇವತೆಗಳಲ್ಲಿದೆಯೆಂದಷ್ಟೇ ಅಲ್ಲ. ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂಬ ವಿಧಿವಾಕ್ಯಗಳೂ ಸಹ ಅನೇಕ ಇರುತ್ತವೆ. 'ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ' ನೂರೊಂದು ವರ್ಷಗಳ ಕಾಲ ಇಂದ್ರದೇವರು ಬ್ರಹ್ಮದೇವರ ಬಳಿ ವಿದ್ಯೆಗಾಗಿ ಬ್ರಹ್ಮಚರ್ಯ ವ್ರತದಿಂದ ಉಪಸತ್ತಿ ಮಾಡಿದರು ಎಂದು. ಆದ್ದರಿಂದ ಮನುಷ್ಯರು ಹೇಗೆ ವೇದವಿದ್ಯೆಗೆ ಅಧಿಕಾರಿಗಳೋ, ಆದರಂತೆ ದೇವತೆಗಳೂ ಕೂಡ ಅಧಿಕಾರಿಗಳಾಗಿರುತ್ತಾರೆ.

ಮಧುವಿದ್ಯೆ ಮೊದಲಾದವನ್ನು ಅಧ್ಯಯನ ಮಾಡಿದರೆ ವಸುಪದವಿ ಮೊದಲಾದವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಇನ್ನು ಕೆಲವು ವಿದ್ಯೆಗಳಿಂದ ಬ್ರಹ್ಮಜ್ಞಾನವು ಬರುತ್ತದೆಂದು ಶ್ರುತಿ ಹೇಳುತ್ತಿದೆ. ಆದರೆ ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ಮತ್ತು ಬ್ರಹ್ಮಜ್ಞಾನವು ದೊರೆತದ್ದರಿಂದ ಪುನಃ ಅದೇ ಫಲಕ್ಕಾಗಿ ಏಕೆ ವೇದಾಧ್ಯಯನದಲ್ಲಿ ತೊಡಗಬೇಕು.

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಬ್ರಹ್ಮಜ್ಞಾನದಲ್ಲಿ ಇನ್ನು ಹೆಚ್ಚಿನ ತತ್ವವನ್ನು ತಿಳಿಯುವುದಕ್ಕಾಗಿ ಮತ್ತು ಮೋಕ್ಷದಲ್ಲಿ ಅತಿಶಯವಾದ ಫಲವನ್ನು ಪಡೆಯುವುದಕ್ಕಾಗಿ ದೇವತೆಗಳು ಪುನಃ ಪುನಃ ವೇದಾಧ್ಯಯನವನ್ನು ಮಾಡುತ್ತಾರೆ.

ಸೂತ್ರಕಾರರ ಸೂತ್ರಗಳ ಜೋಡಣೆಯು ಅತ್ಯಂತ ಸ್ವರಸವಾಗಿದೆ. ಮೊದಲು 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರವನ್ನೇ ಉಲ್ಲೇಖಮಾಡಲು ಕಾರಣ ಹೀಗಿದೆ - ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಹೇಳಲಾಯಿತು. ಮನುಷ್ಯರು ಅಧಿಕಾರಿಗಳು ಎಂದು ಹೇಳಿದರೆ ದೇವತೆಗಳು ಅಧಿಕಾರಿಗಳಲ್ಲ ಎಂದರ್ಥವಲ್ಲ. ಹೊರತು, ಪ್ರಾಣಿಗಳಿಗೆ ಅಧಿಕಾರವಿಲ್ಲ ಎಂದಷ್ಟೇ ಅರ್ಥ. ಈ ವಿಷಯವನ್ನು ಸೂತ್ರಕಾರರೇ ಸ್ವತಃ 'ತದುಪರ್ಯಪಿ' ಇತ್ಯಾದಿ ಸೂತ್ರಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ.

'ತದುಪರಿ' ಎಂದರೆ ಮೊದಲು ಮನುಷ್ಯರಾಗಿದ್ದು, ಅನಂತರ ದೇವತಾ ಪದವಿಯು ಪ್ರಾಪ್ತವಾದ ಮೇಲೂ ಸಹ ಬೌದ್ಧಿಕಸಾಮರ್ಥ್ಯವು ವಿಶಿಷ್ಟವಾಗಿರುವುದರಿಂದ ಆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಬಾದರಾಯಣರು ಈ ವಿಷಯವನ್ನು ಸಮರ್ಥಿಸಿದ್ದಾರೆ. ಆದ್ದರಿಂದ 'ವಿಶಿಷ್ಟಬುದ್ಧ್ಯಾದಿಮತ್ತ್ವ' ಎಂಬ ಪ್ರಧಾನಹೇತುವಿನಿಂದ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವನ್ನು ಮೊದಲು ಸಮರ್ಥಿಸಿದ್ದಾರೆ.

ಹಿಂದಿನ ಸೂತ್ರದಲ್ಲಿ 'ತದುಪರಿ' ಎಂಬ ಪದದಿಂದ ಮನುಷ್ಯರೇ ಮುಂದೆ ದೇವತೆಗಳಾಗುತ್ತಾರೆಂದು ಹೇಳಲಾಗಿದೆ. ಮೊದಲು ಮನುಷ್ಯರಾಗಿದ್ದವರು ಅನಂತರ ದೇವತೆಗಳಾಗುವುದಾದರೆ, ದೇವತೆಗಳಾಗುವ ಮೊದಲು ದೇವತಾಪದವಿಯಲ್ಲಿ ಯಾರೂ ಇರುವುದಿಲ್ಲವೆಂದಂತಾಯಿತು. ಆವಾಗ ದೇವತೋದ್ದೇಶ್ಯಕವಾದ ಕರ್ಮ ಮತ್ತು ತದ್ವಾಚಕವಾದ ಶಬ್ದ ಎಲ್ಲವೂ ಕೂಡ ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ದೇವತಾಪದವಿಯಲ್ಲಿ ಒಬ್ಬರೇ ದೇವತೆಗಳು ಶಾಶ್ವತವಾಗಿರುವುದಿಲ್ಲ. ಯಾವ ದೇವತೆಯು ಮನುಷ್ಯಾವಸ್ಥೆಯಲ್ಲಿದ್ದು ಕರ್ಮಾನುಷ್ಠಾನ ಮಾಡುತ್ತಿರುತ್ತಾನೋ, ಆ ಸಮಯದಲ್ಲಿ ಮತ್ತೊಬ್ಬ ದೇವತೆಯು ಆ ಪದವಿಯಲ್ಲಿ ಇದ್ದೇ ಇರುತ್ತಾನೆ. ಹೀಗೆ ದೇವತಾ ಪ್ರವಾಹವು ಅನಾದಿಯಾಗಿರುವುದರಿಂದ, ಕರ್ಮಗಳು ಎಂದೂ ಸಹ ವ್ಯರ್ಥವಾಗುವುದಿಲ್ಲ ಎಂದು ಸಮರ್ಥಿಸಲಾಗಿದೆ.

ದೇವತೆಗಳು ಅನಿತ್ಯರಾದರೆ, ವೇದವು ಅಪ್ರಾಮಾಣವಾಗಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಮೂರನೆಯ ಸೂತ್ರವು ಉತ್ತರಿಸಿದೆ. ಪರಮಾತ್ಮನು ಸೂರ್ಯ-ಚಂದ್ರರನ್ನು ಹಿಂದಿನ ಕಲ್ಪದಂತೆ, ಈ ಕಲ್ಪದಲ್ಲಿಯೂ ಸೃಷ್ಟಿಮಾಡಿದನು. ಆದ್ದರಿಂದ ದೇವತೆಗಳ ಪ್ರವಾಹವು ನಿತ್ಯವೇ ಆಗಿರುತ್ತದೆ. ಇವೇ ಮೊದಲಾದ ಶಬ್ದರೂಪಪ್ರಮಾಣಗಳಿಂದ ಮತ್ತು ಮಹಾತ್ಮರ ಪ್ರತ್ಯಕ್ಷದಿಂದ ನಮಗೆ ಬರುವ ಅನುಮಾನದಿಂದಲೂ ದೇವತೆಗಳ ಪ್ರವಾಹವು ನಿತ್ಯವೆಂದು ಸಿದ್ಧವಾಗುತ್ತದೆ.

ವೇದಗಳು ನಿತ್ಯವೆಂದು ಸಿದ್ಧವಾದ್ದರಿಂದಲೇ ಅವುಗಳು ಅಪ್ರಮಾಣವಲ್ಲ. ಒಂದು ವೇಳೆ ವಾಚ್ಯವಾದ ದೇವತೆಗಳು ಅನಿತ್ಯರಾದರೆ, ವಾಚಕವಾದ ವೇದವೂ ಕೂಡ ಅನಿತ್ಯವೇ ಆಗಬೇಕಾಗುತ್ತದೆ. ಹೀಗೆ ವಾಚಕನಿತ್ಯತ್ವದ ಅನ್ಯಥಾನುಪಪತ್ತಿಯಿಂದ ವಾಚ್ಯದ ನಿತ್ಯತ್ವವು ಸಿದ್ಧವಾಗುತ್ತದೆಂದು ನಾಲ್ಕನೆಯ ಸೂತ್ರವು ಸಮರ್ಥಿಸಿದೆ. ಹೀಗೆ ನಾಲ್ಕು ಸೂತ್ರಗಳಲ್ಲಿ ದೇವತೆಗಳ ಪ್ರವಾಹವು ನಿತ್ಯವೆಂದು ಸಮರ್ಥಿಸಿದ್ದಾರೆ.

ದೇವತೆಗಳನ್ನು ಪ್ರತಿಪಾದಿಸುವ ವೇದವು ಪ್ರತಿಕಲ್ಪಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಅಂತಹ ವೇದವನ್ನು ನೋಡಿಯೇ ಅದಕ್ಕನುಸಾರಿಯಾಗಿ ಪರಮಾತ್ಮನು ದೇವತೆಗಳನ್ನು ಸೃಷ್ಟಿಮಾಡುತ್ತಾನೆ. ವಾಚಕವಾದ ವೇದವು ನಿತ್ಯವಾದ್ದರಿಂದ ಆ ವೇದದಿಂದ ಪ್ರತಿಪಾದ್ಯರಾದ ದೇವತೆಗಳೂ ಕೂಡ ಪ್ರತಿಕಲ್ಪದಲ್ಲಿಯೂ ಒಂದೇರೀತಿಯಾಗಿ ಇರುತ್ತಾರೆ. ಇದರಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಹೇಳಿದಂತಾಗುತ್ತದೆ.

ಪ್ರತಿಕಲ್ಪದಲ್ಲಿಯೂ ವೇದೋಕ್ತವಾದ ಕರ್ಮವನ್ನು ಅನುಷ್ಠಾನ ಮಾಡಲೇ ಬೇಕು. ಅನುಷ್ಠಾನ ಮಾಡುವಾಗ ಇಂದ್ರಾದಿಗಳನ್ನು ಆಹ್ವಾನ ಮಾಡಬೇಕು. ಆದ್ದರಿಂದ ಪ್ರತಿಕಲ್ಪಗಳಲ್ಲಿಯೂ ಇಂದ್ರಾದಿದೇವತೆಗಳು ಇದ್ದೇ ಇರುತ್ತಾರೆಂದು

ವ್ಯಾಪ್ತಿಯಿಲ್ಲವೆಂಬ ಪಕ್ಷವನ್ನು 'ಅನುಮಾನೋಪಜೀವ್ಯೇನ ಬಾಧಾತ್' ಎಂಬ ಟೀಕೆಯಿಂದ ನಿರಾಕರಿಸಿದ್ದಾರೆ. ಪರ್ವತೇತರತ್ವಾದಿಗಳಿಗೆ ವ್ಯಾಪ್ತಿಯಿರುವುದಾದರೆ ಅನುಮಾನಕ್ಕೆ ಉಪಜೀವ್ಯವಾದ ಅನುಕೂಲ ತರ್ಕದಿಂದ ಬಾಧವು ಬರುತ್ತದೆ. ಆದ್ದರಿಂದಲೇ, ಪರ್ವತೇತರತ್ವಾದಿಗಳು ಆ ಸಂದರ್ಭದಲ್ಲಿ ಉಪಾಧಿಯಾಗುವುದಿಲ್ಲ ಎಂದರ್ಥ. ಏಕೆಂದರೆ, ಅನುಮಾನಕ್ಕೆ ಉಪಜೀವ್ಯವಾದದ್ದು ವ್ಯಾಪ್ತಿ. ವ್ಯಾಪ್ತಿಗೆ ಗ್ರಾಹಕವಾದದ್ದು ಅನುಕೂಲ ತರ್ಕವಾಗಿರುತ್ತದೆ.

ಅನುಕೂಲೇನ ತರ್ಕೇಣ ಸನಾಥೇ ಸತಿ ಸಾಧನೇ ।
ಸಾಧ್ಯವ್ಯಾಪಕತಾಭಂಗಾತ್ ಪಕ್ಷೇ ನೋಪಾಧಿಸಂಭವಃ ॥

ಅನುಕೂಲ ತರ್ಕವಿದ್ದಾಗ ಸಾಧ್ಯವ್ಯಾಪಕತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ, ಪಕ್ಷದಲ್ಲಿ ಉಪಾಧಿಯೇ ಬರುವುದಿಲ್ಲ ಎಂಬ ನ್ಯಾಯದಂತೆ ಇಲ್ಲಿ ಬಾಧದೋಷವನ್ನು ತಿಳಿಯಬೇಕು.

### 'ಅಸಿದ್ಧಿಪರಿಹಾರಾರ್ಥತ್ವಾತ್' ಎಂಬುದರ ಸಮರ್ಥನೆ

**भावदीपः – पक्षव्यावृत्त्यर्थत्वादित्येतदुपपाद्य असिद्धिपरिहारार्थत्वादित्येतदुपपादयति – नचेत्यादिना ।।**

'ಪಕ್ಷವ್ಯಾವೃತ್ತ್ಯರ್ಥತ್ವಾತ್' ಎಂಬುದನ್ನು ಉಪಪಾದನೆ ಮಾಡಿ 'ಅಸಿದ್ಧಿಪರಿಹಾರಾರ್ಥತ್ವಾತ್' ಎಂಬುದನ್ನು ಸಮರ್ಥಿಸಲು 'ನಚ' ಇತ್ಯಾದಿ ವಾಕ್ಯವು ಹೊರಟಿದೆ.

### ಸಮಯಪಾದದಲ್ಲಿ ಅನುಮಾನದ ಬಗ್ಗೆ

**भावदीपः – सन्निहितमिति ।। अवर्जनीयसन्निधि, नतु कार्यकारीति तत्तत्र समयपादे 'सम्बन्धानुपपत्तेश्च' 'अन्तवत्त्वमसर्वज्ञता वा' इत्यत्र निरसिष्यत इत्यर्थः।।**

ಶರೀರವು ಕೇವಲ ಅವರ್ಜನೀಯ ಸನ್ನಿಧಿ ಎನಿಸುತ್ತದೆ ಹೊರತು, ಕಾರ್ಯಕಾರಿಯಾಗುವುದಿಲ್ಲವೆಂದು ಮುಂದೆ ಸಮಯಪಾದದಲ್ಲಿ 'ಸಂಬಂಧಾನುಪಪತ್ತೇಶ್ಚ' 'ಅಂತವತ್ತ್ವಮಸರ್ವಜ್ಞತಾ ವಾ' ಎಂಬ ಸೂತ್ರಗಳಲ್ಲಿ ನಿರಾಕರಿಸಲಾಗುತ್ತದೆ.

ವೇದತ್ವ ಹೇತುವು ಅಸಾಧಾರಣ್ಯದೋಷಗ್ರಸ್ತವಾಗಿದೆ

**भावदीपः – पामरेति ।।** वेदः पामरप्रणीतः वेदत्वाद्, व्यतिरेकेण गगनवदित्यपि प्रयोक्तुं शक्यत्वादित्यर्थः । पामरप्रणीतलौकिकवाक्यात् सपक्षाद् व्यावृत्त्या पक्षमात्रवृत्तेरसाधारण्यं चेत् सर्वज्ञप्रणीतपुराणादितो व्यावृत्त्या पक्षमात्रवृत्तेरसाधारणानैकान्त्यं तवापि तुल्यमित्याह – **असाधारण्यस्येति ।।**

'ವೇದಃ ಪಾಮರಪ್ರಣೀತಃ ವೇದತ್ವಾತ್, ವ್ಯತಿರೇಕೇಣ ಗಗನವತ್' ಎಂದು ಸಹ ಅನುಮಾನ ಮಾಡಲು ಬರುತ್ತದೆ. ಈ ಅನುಮಾನದಲ್ಲಿ ವೇದತ್ವ ಎಂಬ ಹೇತುವು ಅಸಾಧಾರಣ್ಯದೋಷಗ್ರಸ್ತವಾಗಿದೆ. ಏಕೆಂದರೆ ಪಾಮರಪ್ರಣೀತವಾದ ಲೌಕಿಕ ವಾಕ್ಯವೆಂಬ ಸಪಕ್ಷದಲ್ಲಿ ವೇದತ್ವವಿಲ್ಲ. ಕೇವಲ ಪಕ್ಷಮಾತ್ರದಲ್ಲಿ ಇರುತ್ತದೆ. ಆದ್ದರಿಂದ, ಈ ಅನುಮಾನವು ದುಷ್ಟವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೆ, ನಿಮಗೂ ಕೂಡ ಇದೇ ದೋಷವು ಪ್ರಾಪ್ತವಾಗುತ್ತದೆ. ಏಕೆಂದರೆ, ಸರ್ವಜ್ಞಪ್ರಣೀತವಾದ ಪುರಾಣಾದಿಗಳಲ್ಲಿ ವೇದತ್ವಹೇತುವು ಇರುವುದಿಲ್ಲ. ಕೇವಲ ಪಕ್ಷದಲ್ಲಷ್ಟೇ ಹೇತುವು ಇರುತ್ತದೆ. ಆದ್ದರಿಂದ ಅಸಾಧಾರಣ್ಯ ಅನೈಕಾಂತ್ಯ ದೋಷವು ನಿಮಗೂ ಸಮಾನವಾಗಿದೆ ಎಂದು 'ಅಸಾಧಾರಣ್ಯಸ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ಈಶ್ವರನಿಗೆ ಸಾರ್ವಜ್ಞ್ಯವು ಹೇಗೆ ಸಿದ್ಧವಾಗುತ್ತದೆ ?

**भावदीपः – उक्तेति ।।** ईश्वरसार्वज्ञ्यासिद्धिरूपोक्तदोषादित्यर्थः । वेदप्रणेतृत्वोक्त्यन्यथानुपपत्त्या सार्वज्ञं सेत्स्यतीत्यतो व्यभिचारान्नैवमित्याह – **ऋग्वेद एवेति ।। तद्वाक्यादिति ।।** ऋग्वेद इति वाक्यादित्यर्थः ।

ಈಶ್ವರನಿಗೆ ಸಾರ್ವಜ್ಞ್ಯವು ಸಿದ್ಧವಾಗುವುದಿಲ್ಲ ಎಂದು ಹಿಂದೆ ಹೇಳಿದ ದೋಷವು ಪುನಃ ಪ್ರಾಪ್ತವಾಗುತ್ತದೆಂದರ್ಥ. ವೇದಪ್ರಣೇತೃತ್ವೋಕ್ತಿಯ ಅನ್ಯಥಾನುಪಪತ್ತಿಯಿಂದ ಸಾರ್ವಜ್ಞ್ಯವು ಸಿದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ವ್ಯಭಿಚಾರ ಬರುವ ಕಾರಣ ಹೀಗೆ ಹೇಳಬಾರದೆಂದು 'ಋಗ್ವೇದ ಏವ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ತದ್ವಾಕ್ಯಾತ್' ಎಂದರೆ 'ಋಗ್ವೇದಃ' ಎಂಬ ವಾಕ್ಯದಿಂದ ಎಂದರ್ಥ. ಯಾವುದೇ ವಿಶೇಷವಿಲ್ಲವೆಂದು ಇದರ ಅಭಿಪ್ರಾಯ.

ಅಸಾರ್ವಜ್ಞದೋಷವು ಇಬ್ಬರಿಗೂ ಸಮಾನ

**भावदीपः** – अविशेषादिति भावः । विशेषमाशङ्कते – **तेषामिति** ।। समं प्रकृतेऽपि । उक्तदिशा ईश्वरसार्वज्ञस्याप्यसिद्धेरिति भावः । 'यः सर्वज्ञः' इत्यादि वेदेनैव तत्सार्वज्ञसिद्धिरस्त्वित्यत आह – **चक्रकेति** ।।

ವಿಶೇಷ ಕಾರಣವನ್ನು ಹೇಳುವ ಮೂಲಕ ಆಶಂಕಿಸುತ್ತಿದ್ದಾನೆ, ತೇಷಾಮಿತ್ಯಾದಿ ಟೀಕೆಯಿಂದ. ಅಸಾರ್ವಜ್ಞ ದೋಷವು ಪ್ರಕೃತ ನಿಮಗೂ ಸಮಾನ. ಏಕೆಂದರೆ, ಹಿಂದೆ ಹೇಳಿದಂತೆ ಈಶ್ವರನಿಗೆ ಸಾರ್ವಜ್ಞ್ಯವು ಇಲ್ಲಿಯ ತನಕ ಸಿದ್ಧವೇ ಆಗಿಲ್ಲವೆಂದು ಅಭಿಪ್ರಾಯ. 'ಯಃ ಸರ್ವಜ್ಞಃ' ಇತ್ಯಾದಿ ವೇದವಾಕ್ಯದಿಂದಲೇ ಈಶ್ವರನಿಗೆ ಸಾರ್ವಜ್ಞ್ಯ ಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಚಕ್ರಕ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಸರ್ವಜ್ಞಪ್ರಣೀತತ್ವವು ವೇದಕ್ಕೆ ಸಿದ್ಧವಾಗುತ್ತದಲ್ಲವೇ ?

**भावदीपः** – ईश्वरस्य सर्वज्ञत्वे सिद्धे 'तस्माद् यज्ञाद्' इत्यादिना वेदस्य सर्वज्ञप्रणीतत्वसिद्धिः, तत्सिद्धौ च वेदस्य प्रामाण्यसिद्धिः, तत्सिद्धौ च वेदेनेश्वर-सर्वज्ञत्वसिद्धिरिति चक्रकापातादित्यर्थः । नित्यत्वापेक्षत्वाच्च मूलप्रमाणस्येत्येतद् व्याचष्टे – **किञ्चेति** ।।

ಈಶ್ವರನು ಸರ್ವಜ್ಞನೆಂದು ಸಿದ್ಧವಾದರೆ 'ತಸ್ಮಾದ್ ಯಜ್ಞಾತ್' ಎಂಬ ವೇದವಾಕ್ಯದಿಂದ ಸರ್ವಜ್ಞಪ್ರಣೀತತ್ವವು ವೇದಕ್ಕೆ ಸಿದ್ಧವಾಗುತ್ತದೆ. ವೇದವು ಸರ್ವಜ್ಞಪ್ರಣೀತವೆಂದು ಸಿದ್ಧವಾದರೆ ವೇದವು ಪ್ರಮಾಣವೆಂದು ಸಿದ್ಧವಾಗುತ್ತದೆ. ಅಂತಹ ವೇದದಿಂದ ಈಶ್ವರನು ಸರ್ವಜ್ಞನೆಂದು ಸಿದ್ಧನಾಗುತ್ತಾನೆ. ಹೀಗೆ, ಚಕ್ರಕಾಶ್ರಯ ದೋಷವು ಬರುತ್ತದೆ. 'ನಿತ್ಯತ್ವಾಪೇಕ್ಷತ್ವಾಚ್ಚ ಮೂಲಪ್ರಮಾಣಸ್ಯ' ಎಂಬ ಭಾಷ್ಯವನ್ನು 'ಕಿಂಚ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮೂಲ ಪ್ರಮಾಣವೆಂದರೆ ಯಾವುದು ?

**भावदीपः** – **मूलेति** ।। अर्थमुपलभ्य रचितत्वं प्रणीतत्वमिति

**वाच्यत्वादिति भावः। तत्किं प्रत्यक्षमनुमानं पौरुषेयवाक्यं वा? न त्रयमपीति क्रमेण निराह – नचेति ।।**

ವೇದವು ಆಪ್ತಪ್ರಣೀತವಾದಲ್ಲಿ ಅದಕ್ಕೊಂದು ಮೂಲ ಪ್ರಮಾಣ ಬೇಕಾಗುತ್ತದೆ. ಅಂದರೆ, ಮತ್ತೊಂದು ಪ್ರಮಾಣದಿಂದ ಅರ್ಥವನ್ನು ತಿಳಿದು ವೇದವನ್ನು ರಚನೆ ಮಾಡಿದ್ದಾರೆಂದು ಹೇಳಬೇಕಾಗುತ್ತದೆ. ಆ ಮೂಲ ಪ್ರಮಾಣವೆಂದರೆ ಪ್ರತ್ಯಕ್ಷವೋ ಅನುಮಾನವೋ, ಪೌರುಷೇಯ ವಾಕ್ಯವೋ, ಮೂರನ್ನು ಸಹ ಕ್ರಮವಾಗಿ ನಿರಾಕರಿಸುತ್ತಿದ್ದಾರೆ, 'ನಚ' ಇತ್ಯಾದಿ ಟೀಕೆಯಿಂದ.

ನಿತ್ಯತ್ವವಿಷಯದಲ್ಲೂ ಪ್ರಾಮಾಣ್ಯವಿಲ್ಲ

**भावदीपः** – **स्वतःप्रामाण्यप्रसिद्धेश्चेत्येतदवतार्य व्याचष्टे** – **नन्विति ।।** न केवलमनित्यत्व इत्यपेरर्थः । स्वतस्त्वेन ज्ञानजनकसहजशक्त्यैव प्रमात्वजनकत्वेनेत्यर्थः।। **प्रामाण्यं नामेति ।। वेदस्येत्यनुषङ्गः ।**

'ಸ್ವತಃಪ್ರಾಮಾಣ್ಯಪ್ರಸಿದ್ಧೇಶ್ಚ' ಎಂಬುದಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ನನು' ಇತ್ಯಾದಿ ಟೀಕೆಯಿಂದ. 'ಅಪಿ' ಶಬ್ದಕ್ಕೆ 'ನನು ವೇದಸ್ಯ ನಿತ್ಯತ್ವೇಽಪಿ' ಎಂಬಲ್ಲಿರುವ 'ಅಪಿ' ಶಬ್ದಕ್ಕೆ ಅನಿತ್ಯತ್ವವಿಷಯದಲ್ಲಷ್ಟೇ ಅಲ್ಲ, ನಿತ್ಯತ್ವವಿಷಯದಲ್ಲೂ ಪ್ರಾಮಾಣ್ಯವಿಲ್ಲ ಎಂದರ್ಥ. ಏಕೆಂದರೆ, ಪ್ರಾಮಾಣ್ಯವು ಸ್ವತಃಸಿದ್ಧವಾದ್ದರಿಂದ ಜ್ಞಾನಜನಕ ಸಹಜಶಕ್ತಿಯಿಂದಲೇ ಯಥಾರ್ಥಜ್ಞಾನಜನಕವಾಗಿದೆ. 'ಪ್ರಾಮಾಣ್ಯಂ ನಾಮ' ಎಂಬಲ್ಲಿ 'ವೇದಸ್ಯ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

ಯಾಥಾರ್ಥ್ಯವೆಂದರೆ ಏನು ?

**भावदीपः** – **तादृशप्रामाण्यस्य स्वतस्त्वं ज्ञानयाथार्थ्यस्वतस्त्वायत्तमिति** भावेन व्यनक्ति – **नचेति** ।। **ज्ञाननिष्ठमित्यर्थः** ।। **याथार्थ्यमिति** ।। **प्रमात्वरूपम्** ।। **ज्ञानकारणेति** ।। कारणपदं समग्रकारणपरम् ।

ವೇದಕ್ಕೆ ಹೇಳುವಂತಹ ಪ್ರಾಮಾಣ್ಯವು ಸ್ವತಃಸಿದ್ಧವಾಗಿದೆ. ಅಂದರೆ, ಜ್ಞಾನದ ಯಾಥಾರ್ಥ್ಯವು ಜ್ಞಾನಕಾರಣಕ್ಕಿಂತ ವ್ಯತಿರಿಕ್ತ ಕಾರಣವನ್ನು ಅಪೇಕ್ಷಿಸುವುದಿಲ್ಲ. ಈ ಅಭಿಪ್ರಾಯದಿಂದ 'ನಚ' ಇತ್ಯಾದಿ

ಗ್ರಂಥವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಾಥಾರ್ಥ್ಯವೆಂದರೆ ಜ್ಞಾನದಲ್ಲಿ ಇರುವ ಯಥಾರ್ಥತ್ವ ಎಂದರ್ಥ. ಅದು ಪ್ರಮಾತ್ವರೂಪವಾಗಿದೆ. ಜ್ಞಾನಕಾರಣ ಎಂಬಲ್ಲಿರುವ ಕಾರಣಪದವು ಸಮಗ್ರ ಕಾರಣಗಳನ್ನು ಹೇಳುತ್ತಿದೆ.

### ದೋಷಾಭಾವವನ್ನು ಪ್ರಾಮಾಣ್ಯಕ್ಕೆ ಕಾರಣವೆನ್ನಬಹುದೇ ?

**भावदीपः** – ननु दोषाभावस्य कारणत्वेऽपि नास्माकमनिष्टमित्युपरितन वाक्याद् दोषाभावस्य याथार्थ्ये कारणत्वेन एवंरूपसाध्यस्य साधने बाध इति चेन्न ।

ಟೀಕೆಯಲ್ಲಿ 'ಯಾಥಾರ್ಥ್ಯಂ ಜ್ಞಾನಕಾರಣ ಅತಿರಿಕ್ತಕಾರಣನಿರಪೇಕ್ಷಮ್, ಅಯಾಥಾರ್ಥ ಅತಿರಕ್ತತ್ವೇऽಪಿ ಜ್ಞಾನಧರ್ಮತ್ವಾತ್ ಜ್ಞಾನತ್ವವತ್' ಎಂಬ ಅನುಮಾನದಿಂದ ಯಾಥಾರ್ಥ್ಯವು ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದು ಸಾಧನೆ ಮಾಡಿದ್ದಾರೆ. ಆದರೆ ದೋಷಾಭಾವವನ್ನು ಕಾರಣವೆಂದು ನಾವೂ ಸಹ ಹೇಳುತ್ತೇವೆ. ಮುಂದೆ ದೋಷಾಭಾವವನ್ನು ಕಾರಣವೆಂದು ಸಮರ್ಥಿಸಲಾಗುತ್ತದೆ. ಹೀಗಿರುವಾಗ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಮತ್ತೊಂದು ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದು ಸಾಧನೆ ಮಾಡಿದರೆ, ಬಾಧದೋಷವು ಬರುತ್ತದಲ್ಲವೇ?

### ದೋಷಾಭಾವವನ್ನು ಕಾರಣವೆಂದಾಗ ಬಾಧವಿಲ್ಲ

**भावदीपः** – भावकारणानपेक्षमिति तात्पर्यात् ।

ಭಾವರೂಪವಾದ ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದಷ್ಟೇ ಅನುಮಾನದ ಅಭಿಪ್ರಾಯ. ದೋಷಾಭಾವವು ಅಭಾವರೂಪವಾದ್ದರಿಂದ, ಇದನ್ನು ಕಾರಣವನ್ನಾಗಿ ಮುಂದೆ ಹೇಳಿದರೂ ಕೂಡ, ಬಾಧದೋಷಕ್ಕೆ ಅವಕಾಶವಿರುವುದಿಲ್ಲ.

### ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವೇ ಅಲ್ಲ

**भावदीपः** – यद्वा दोषाभावोऽपि न प्रामाण्यकारणम् । यादृच्छिकसंवादिषु सत्यपि दोषो प्रमाणज्ञानोदयादिति तत्त्वनिर्णयटीकोक्त्या तर्हि दोषाभावः

कारणमित्यायातमिति चेन्न । तथा सत्युत्सर्गापवादयोः क्वाप्यभावप्रसङ्गादिति सुधोक्त्या च दोषाभावः कारणं नेति भावेन एवं साध्योक्तिः ।

ಅಥವಾ, ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವೇ ಅಲ್ಲ. ಏಕೆಂದರೆ 'ದೋಷಾಭಾವೋऽಪಿ ನ ಪ್ರಾಮಾಣ್ಯಕಾರಣಮ್, ಯಾದೃಚ್ಛಿಕಸಂವಾದಿಷು ಸತ್ಯಪಿ ದೋಷೇ ಪ್ರಮಾಣಜ್ಞಾನೋದಯಾತ್' ಎಂದು ತತ್ವನಿರ್ಣಯಟೀಕೆಯಲ್ಲಿ ಹೇಳಿದ್ದಾರೆ. ಅಂದರೆ ದೋಷಾಭಾವವನ್ನು ಕಾರಣವೆಂದು ಹೇಳಬೇಕಾದರೆ ಅನ್ವಯವ್ಯತಿರೇಕವನ್ನು ಹೇಳಬೇಕು. 'ದೋಷಾಭಾವವಿದ್ದರೆ, ಪ್ರಾಮಾಣ್ಯವಿರುವುದಿಲ್ಲ. ದೋಷಾಭಾವವಿಲ್ಲದಿದ್ದಲ್ಲಿ, ಪ್ರಾಮಾಣ್ಯವಿರುತ್ತದೆ' ಎಂದು ಹೇಳಬೇಕು. ಆದರೆ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ 'ನದೀತೀರೇ ಪಂಚಫಲಾನಿ ಸಂತಿ' ಎಂಬ ವಾಕ್ಯವನ್ನು ಪ್ರಯೋಗಿಸುತ್ತಾನೆ. ಈ ವಾಕ್ಯದಲ್ಲಿ ವಿಪ್ರಲಿಪ್ಸ ಎಂಬ ದೋಷವೇ ಇದೆ. ಆದರೆ ಪ್ರಾಮಾಣ್ಯವು ಕೂಡ ಇರುತ್ತದೆ. ಆದ್ದರಿಂದ ದೋಷಾಭಾವವಿದ್ದರೆ ಮಾತ್ರ ಪ್ರಾಮಾಣ್ಯವಿರುತ್ತದೆಂಬ ಅನ್ವಯವ್ಯಾಪ್ತಿಯನ್ನು ಇಲ್ಲಿ ಹೇಳಲಾಗದು. ಆದ್ದರಿಂದ ದೋಷಾಭಾವವನ್ನು ಪ್ರಾಮಾಣ್ಯಕ್ಕೆ ಕಾರಣವೆಂದು ಹೇಳಲು ಬರುವುದಿಲ್ಲ. ಮತ್ತು ನ್ಯಾಯಸುಧೆಯಲ್ಲಿ 'ತರ್ಹಿ ದೋಷಾಭಾವಃ ಕಾರಣಮಿತ್ಯಾಯಾತಮಿತಿ ಚೇನ್ನ, ತಥಾ ಸತಿ ಉತ್ಸರ್ಗಾಪವಾದಯೋಃ ಕ್ವಾಪ್ಯಭಾವಪ್ರಸಂಗಾತ್' ಹಾಗಾದರೆ ದೋಷಾಭಾವವನ್ನು ಕಾರಣವೆಂದು ಹೇಳುತ್ತಿರೋ? ಎಂದು ಪ್ರಶ್ನಿಸಿಕೊಂಡು, ದೋಷಾಭಾವವನ್ನು ಕಾರಣವೆಂದು ಹೇಳಿದರೆ, ಉತ್ಸರ್ಗಾಪವಾದನ್ಯಾಯವೇ ಎಲ್ಲಿಯೂ ಇಲ್ಲವೆಂದು ಹೇಳಬೇಕಾದೀತು ಎಂದು ಉತ್ತರಿಸಿದ್ದಾರೆ. ಸುಧೆಯ ಈ ಮಾತಿನಿಂದಲೂ ದೋಷಾಭಾವವು ಕಾರಣವಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಕೃತ ಅನುಮಾನದಲ್ಲಿ ಯಾಥಾರ್ಥ್ಯಕ್ಕೆ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಮತ್ತೊಂದು ಕಾರಣದ ಅಪೇಕ್ಷೆಯಿರುವುದಿಲ್ಲವೆಂದು ಸಾಧನೆ ಮಾಡಿದರೆ, ಬಾಧದೋಷಕ್ಕೆ ಸರ್ವಥಾ ಅವಕಾಶವಿರುವುದಿಲ್ಲ.

ಹಾಗೇನಾದರೂ ಹೇಳಿದ್ದರೆ ಅದು ಅಂಗೀಕಾರವಾದ

**भावदीपः** – अग्रे कारणत्वोक्तिस्तु तावता प्रकृतवेदनित्यत्वाक्षतेरभ्युपेत्य वादेन वा 'निर्दोषः शब्द आगमः' इति प्रमाणलक्षणे 'आगमोऽदुष्टवाक्यं च' इति तत्त्वनिर्णयादौ च दोषाभावस्याप्युक्त्या दण्डगतदार्ढ्यादिवत् प्रयोजकत्वाभिप्राया वा

ಹಾಗಾದರೆ ಮುಂದೆ ಟೀಕೆಯಲ್ಲಿಯೇ ದೋಷಾಭಾವವನ್ನು ಕಾರಣವೆಂದು ಹೇಳಿದ್ದಾರಲ್ಲವೇ? ಎಂದರೆ, ಅಭ್ಯುಪೇತ್ಯವಾದದಿಂದ ಹಾಗೆ ಹೇಳಿದ್ದು. ಅಂದರೆ ವೇದಾಪೌರುಷೇಯತ್ವವನ್ನು ಸಾಧನೆ ಮಾಡುವಾಗ ದೋಷಾಭಾವವನ್ನು ಪ್ರಾಮಾಣ್ಯಕ್ಕೆ ಕಾರಣವೆಂದು ಒಪ್ಪುವುದರಿಂದ ಏನೂ ಹಾನಿಯಿರುವುದಿಲ್ಲ. ಒಂದುವೇಳೆ ದೋಷಾಭಾವವನ್ನು ಕಾರಣವೆಂದು ಒಪ್ಪಿದರೂ ಸಹ ವೇದಾಪೌರುಷೇಯತ್ವಕ್ಕೆ ಏನೂ ಭಂಗವಿಲ್ಲ ಎಂಬ ಅಭಿಪ್ರಾಯದಿಂದಷ್ಟೇ ಟೀಕೆಯ ಮಾತು ಹೊರಟಿದೆ. ಅಥವಾ ಪ್ರಮಾಣಲಕ್ಷಣದಲ್ಲಿ 'ನಿರ್ದೋಷಃ ಶಬ್ದಃ ಆಗಮಃ' ಎಂದು ದೋಷಾಭಾವವನ್ನು ಸೇರಿಸಿಕೊಂಡೇ ಲಕ್ಷಣವನ್ನು ಹೇಳಿರುತ್ತಾರೆ. ತತ್ವನಿರ್ಣಯದಲ್ಲಿಯೂ 'ಆಗಮೋಽದುಷ್ಟವಾಕ್ಯಂ ಚ' ಎಂದು ದೋಷಾಭಾವವನ್ನು ಸೇರಿಸಿಕೊಂಡೇ ಲಕ್ಷಣವನ್ನು ಹೇಳಿದ್ದಾರೆ. ಈ ವಾಕ್ಯಗಳು ಕೇವಲ ಪ್ರಯೋಜಕತ್ವಾಭಿಪ್ರಾಯದಿಂದ ಹೊರಟಿವೆ. ಹೇಗೆಂದರೆ ಘಟಕ್ಕೆ ದಂಡವೇ ಕಾರಣ. ಆದರೆ ದಂಡದಲ್ಲಿ ದಾರ್ಢ್ಯವಿಲ್ಲದಿದ್ದರೆ ಘಟ ಹುಟ್ಟುವುದಿಲ್ಲ. ಅಂದಮಾತ್ರಕ್ಕೆ ದಂಡದಲ್ಲಿರುವ ದಾರ್ಢ್ಯವನ್ನು ಕಾರಣವೆಂದು ಯಾರೂ ಹೇಳುವುದಿಲ್ಲ. ಹೊರತಾಗಿ, ದಂಡವೇ ಕಾರಣ, ದಂಡದಲ್ಲಿರುವ ದಾರ್ಢ್ಯವು ಕೇವಲ ಪ್ರಯೋಜಕವೆಂದು ಹೇಗೆ ಹೇಳುತ್ತಾರೋ? ಅದರಂತೆ ದೋಷಾಭಾವವು ಕೇವಲ ಪ್ರಯೋಜಕವಾಗಿದೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು.

## ಪ್ರಾಮಾಣ್ಯಸ್ವತಸ್ತ್ವವಿಚಾರ

**भावदीपः – ज्ञानजनकत्वशक्तिरेव प्रामाण्यजनकत्वशक्तिरिति पद्धत्युक्त्या ज्ञानजनकशक्तियाथार्थ्यजनकशक्त्योरेकत्वपक्षे चायं साध्यनिर्देशो बोध्यः ।**

ಕರಣಗಳಲ್ಲಿ ಯಾವ ಜ್ಞಾನಜನಕತ್ವಶಕ್ತಿಯಿದೆಯೋ, ಅದೇ ಪ್ರಾಮಾಣ್ಯಜನಕಶಕ್ತಿಯಾಗಿದೆ ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಜ್ಞಾನಜನಕತ್ವ ಶಕ್ತಿಯು ಹೇಗೆ ಸಹಜವೋ, ಅದರಂತೆ ಪ್ರಾಮಾಣ್ಯಜನಕಶಕ್ತಿಯೂ ಕೂಡ ಸಹಜ. ಅಂದರೆ ಪ್ರಾಮಾಣ್ಯಜನನಶಕ್ತಿಯೇ ಬೇರೆ, ಜ್ಞಾನಜನಕಶಕ್ತಿಯೇ ಬೇರೆ ಎಂದು ಇನ್ನು ಕೆಲವರು ಹೇಳುತ್ತಾರೆ. ಈ ಎರಡು ಮತಗಳಲ್ಲಿ ಎರಡನೆಯ ಮತವನ್ನು ವಿವಕ್ಷಿಸಿದಾಗ, 'ಜ್ಞಾನಕಾರಣಾತಿರಿಕ್ತಕಾರಣನಿರಪೇಕ್ಷಂ' ಎಂಬ ಸಾಧ್ಯವು ಬಾಧಿತವೇ ಆಗುತ್ತದೆ. ಏಕೆಂದರೆ ಜ್ಞಾನಕಾರಣವಾದ ಯಾವ ಶಕ್ತಿಯಿದೆಯೋ, ಅದಕ್ಕಿಂತ ಬೇರೆಯಾದ ಶಕ್ತಿಯಿಂದಲೇ ಪ್ರಾಮಾಣ್ಯ ಹುಟ್ಟುತ್ತದೆ. ಆದ್ದರಿಂದ ಬಾಧದೋಷವು ಬರುತ್ತದೆ. ಆದ್ದರಿಂದ ಈ ಮತವನ್ನು ಬಿಟ್ಟು ಮೊದಲನೆಯ

ಮತದ ಪ್ರಕಾರ ಅನುಮಾನವನ್ನು ಪ್ರಯೋಗಿಸಲಾಗಿದೆ ಎಂದು ತಿಳಿಯಬೇಕು. ಅಂದರೆ ಕರಣಗಳಲ್ಲಿ ಯಾವ ಜ್ಞಾನಜನಕತ್ವಶಕ್ತಿಯಿದೆಯೋ, ಅದೇ ಪ್ರಾಮಾಣ್ಯಜನಕಶಕ್ತಿಯಾಗಿದೆ ಎಂಬ ಮತದ ಪ್ರಕಾರ ಸಾಧ್ಯಕ್ಕೆ ಬಾಧದೋಷ ಬರಲು ಸಾಧ್ಯವಿಲ್ಲ.

### ಯಥಾರ್ಥ್ಯಜನನಶಕ್ತಿಯು ಸಹಜವೆಂದು ಒಪ್ಪಬೇಕು

**भावदीपः** – यदा तु दोषवशात् प्रमाजननशक्तिप्रतिबन्धेऽपि ज्ञानजननशक्तेरप्रतिबन्धाज्ज्ञानप्रमाऽपीत्यादिना याथार्थ्यज्ञानजननशक्त्योर्भिन्नत्वमभ्युपेत्य द्वयोः सहजत्वमात्रेण स्वतस्त्वमिति मतम्, तदाऽतिरिक्तागन्तुकानपेक्षमिति साध्यार्थो बोध्यः ।

ಯಾವ ಮತದ ಪ್ರಕಾರ ದೋಷದಿಂದ ಪ್ರಮಾಜನನಶಕ್ತಿಯು ಪ್ರತಿಬಂಧವಾದರೂ ಜ್ಞಾನಜನನ ಶಕ್ತಿಯು ಪ್ರತಿಬಂಧವಾಗುವುದಿಲ್ಲವೋ ಆ ಮತದ ಪ್ರಕಾರ ಯಾಥಾರ್ಥ್ಯಜನನಶಕ್ತಿ ಹಾಗೂ ಜ್ಞಾನಜನನಶಕ್ತಿ ಎರಡು ಬೇರೆ ಬೇರೆಯಾದರೂ ಸಹಜವಾಗಿದೆ ಎಂದು ಹೇಳಬೇಕು. ಆದ್ದರಿಂದ ಟೀಕೆಯಲ್ಲಿ 'ಜ್ಞಾನಕಾರಣಾತಿರಿಕ್ತಕಾರಣನಿರಪೇಕ್ಷಮ್' ಎಂಬ ಸಾಧ್ಯಕ್ಕೆ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಆಗಂತುಕಕಾರಣನಿರಪೇಕ್ಷವಾಗಿದೆಯೆಂದರ್ಥ. ಇವರು ಯಾಥಾರ್ಥ್ಯಜನನಶಕ್ತಿಯನ್ನು ಸಹಜವೆಂದು ಒಪ್ಪಿರುವುದರಿಂದ ಆಗಂತುಕಕಾರಣದ ಅಪೇಕ್ಷೆಯಿದೆಯೆಂದು ಹೇಳುವುದಿಲ್ಲ. ಸಹಜವೆಂದು ಒಪ್ಪುವುದರಿಂದಲೇ ಪ್ರಾಮಾಣ್ಯಸ್ವತಸ್ತ್ವವು ಇವರ ಮತದಲ್ಲಿ ಯುಕ್ತವಾಗುತ್ತದೆ.

### ಯಥಾರ್ಥ್ಯವು ಗುಣೋತ್ಪನ್ನವಲ್ಲ

**भावदीपः** – न गुणोत्पन्नमिति साध्ये तु न कापि विवक्षा । दोषसापेक्षाप्रामाण्ये व्यभिचारनिरासाय हेतौ सत्यन्तम् ।।

ಅಥವಾ 'ಯಾಥಾರ್ಥ್ಯಂ ಜ್ಞಾನಕಾರಣಾತಿರಿಕ್ತಕಾರಣನಿರಪೇಕ್ಷಮ್' ಎಂಬ ಸಾಧ್ಯದ ಅಭಿಪ್ರಾಯ ಹೀಗಿದೆ - ತಾರ್ಕಿಕಾದಿಗಳು ಹೇಳುವಂತೆ ಯಾಥಾರ್ಥ್ಯವು ಗುಣೋತ್ಪನ್ನವಲ್ಲ ಎಂದು. ಹೀಗೆ ವಿವಕ್ಷಿಸಿದಾಗ ದೋಷಾಭಾವವು ಕಾರಣವೆಂಬ ಚರ್ಚೆಗೆ ಅವಕಾಶವೇ ಇರುವುದಿಲ್ಲ. ಇನ್ನು 'ಅಯಥಾರ್ಥತಾತಿರಿಕ್ತತ್ವೇಸತಿ ಜ್ಞಾನಧರ್ಮತ್ವಾತ್' ಎಂಬ ಹೇತುವಿನಲ್ಲಿ ಸತ್ಯಂತ ಪದವನ್ನು ಹೇಳದಿದ್ದರೆ ಅಪ್ರಾಮಾಣ್ಯದಲ್ಲಿ ವ್ಯಭಿಚಾರ ಬರುತ್ತದೆ. ಏಕೆಂದರೆ ಅಪ್ರಾಮಾಣ್ಯವು ಜ್ಞಾನಧರ್ಮವಾಗಿದೆ. ಆದರೆ ಜ್ಞಾನಕಾರಣಾತಿರಿಕ್ತವಾದ

ದೋಷವನ್ನು ಅಪೇಕ್ಷೆ ಪಡುವುದರಿಂದ ಸಾಧ್ಯಬರುವುದಿಲ್ಲ. ಅದಕ್ಕಾಗಿ 'ಅಯಥಾರ್ಥತಾತಿರಿಕ್ತತ್ವೇಸತಿ' ಎಂಬ ವಿಶೇಷಣವನ್ನು ನೀಡಬೇಕು. ಅಪ್ರಾಮಾಣ್ಯವು ಅಯಥಾರ್ಥವೇ ಆಗಿರುವುದರಿಂದ ಹೇತುವು ಬರುವುದಿಲ್ಲವೆಂದು ವ್ಯಭಿಚಾರಕ್ಕೆ ಅವಕಾಶವಿಲ್ಲ.

### ಅಯಥಾರ್ಥದಲ್ಲಿ ಸ್ವತಸ್ತ್ವವಿಲ್ಲ

**भावदीपः – स्वतस्त्वमिति ।।** अयाथार्थ्यं ज्ञानकारणातिरिक्तकारणान पेक्षम् । न दोषोत्पन्नं वा । ज्ञानधर्मत्वाद् याथार्थ्यवदित्यर्थः । उभयत्र साध्ये सकृदेव दोषमाह – **दोषाभाव इति ।।**

'ಸ್ವತಸ್ತ್ವಂ ವಾಚ್ಯಮ್' ಎಂಬುದರ ಅಭಿಪ್ರಾಯ ಹೀಗಿದೆ - ಯಾಥಾರ್ಥ್ಯದಲ್ಲಿ ಸ್ವತಸ್ತ್ವವನ್ನು ಉಪಪಾದನೆ ಮಾಡಿದಂತೆ ಅಯಥಾರ್ಥದಲ್ಲಿಯೂ ಕೂಡ ಸ್ವತಸ್ತ್ವವನ್ನು ಅನುಮಾನದಿಂದಲೇ ಉಪಪಾದನೆ ಮಾಡಬಹುದು. 'ಅಯಾಥಾರ್ಥ್ಯಂ ಜ್ಞಾನಕಾರಣಾತಿರಿಕ್ತಾಕಾರಣಾನಪೇಕ್ಷಂ ಜ್ಞಾನಧರ್ಮತ್ವಾತ್ ಯಾಥಾರ್ಥ್ಯವತ್' ಎಂದು ಅಥವಾ 'ಅಯಾಥಾರ್ಥ್ಯಂ ನ ದೋಷೋತ್ಪನ್ನಂ ಜ್ಞಾನಧರ್ಮತ್ವಾತ್ ಯಾಥಾರ್ಥ್ಯವತ್' ಎಂದೂ ಕೂಡ ಪ್ರಯೋಗಿಸಬಹುದಲ್ಲವೇ? ಎಂದು ಪ್ರಶ್ನಿಸಿದರೆ ಎರಡು ಬಗೆಯ ಸಾಧ್ಯಗಳಲ್ಲಿಯೂ ಒಟ್ಟಿಗೆ ದೋಷವನ್ನು ಹೇಳುತ್ತಿದ್ದಾರೆ 'ದೋಷಾಭಾವೇ' ಎಂಬ ವಾಕ್ಯದಿಂದ.

### ದೋಷವಿಲ್ಲದಿದ್ದರೆ ಅಪ್ರಾಮಾಣ್ಯವಿರುವುದಿಲ್ಲ ಎಂಬ ವ್ಯಾಪ್ತಿಯ ಬಗ್ಗೆ

**भावदीपः –** यादृच्छिकसंवादीति सत्यपि दोषेऽयाथार्थ्यादर्शनेनान्वयमनुक्त्वा दोषाभावेऽयाथार्थ्याभाव इति व्यतिरेक एवोक्तः । दोषकारणताग्राहकमानबाध इत्यर्थः।

ಟೀಕೆಯಲ್ಲಿ 'ದೋಷವಿಲ್ಲದಿದ್ದರೆ ಅಪ್ರಾಮಾಣ್ಯವಿರುವುದಿಲ್ಲ' ಎಂದು ವ್ಯತಿರೇಕವ್ಯಾಪ್ತಿಯನ್ನೇ ಹೇಳಿದ್ದಾರೆ ಅನ್ವಯವ್ಯಾಪ್ತಿಯನ್ನೇಕೆ ? ಹೇಳಿಲ್ಲ ಎಂದರೆ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ದೋಷವಿದ್ದರೆ ಅಯಥಾರ್ಥವೇ ಇರುವುದು ಕಂಡಿದೆ. ಆದ್ದರಿಂದ ಅನ್ವಯವ್ಯಾಪ್ತಿಗೆ ವ್ಯಭಿಚಾರ ಬರುವುದರಿಂದ ಕೇವಲ ವ್ಯತಿರೇಕವ್ಯಾಪ್ತಿಯನ್ನಷ್ಟೇ ಟೀಕೆಯಲ್ಲಿ ಹೇಳಿದ್ದಾರೆ. ಆದ್ದರಿಂದ ದೋಷಕಾರಣತಾಗ್ರಾಹಕವಾದ ಪ್ರಮಾಣವೆಂದರೆ ವ್ಯತಿರೇಕವ್ಯಾಪ್ತಿ, ಇದರಿಂದ ಬಾಧ ಬರುತ್ತದೆಂದು ಅಭಿಪ್ರಾಯ.

ಪ್ರಾಮಾಣ್ಯಮ್ ಸ್ವತಃ ಅಪ್ರಾಮಾಣ್ಯಮ್ ಪರತಃ

**भावदीपः** – नचैवं गुणेऽस्ति । गुणाभावेऽपि यादृच्छिकस्थले याथार्थ्योपलम्भेन व्यतिरेकव्यभिचारादिति भावः ।।

ಇದರಂತೆ ಗುಣದಲ್ಲಿಯೂ ಕೂಡ ಹೇಳಲು ಸಾಧ್ಯವಿಲ್ಲ. ಏಕೆಂದರೆ ಗುಣ ಇದ್ದರೆ ಪ್ರಾಮಾಣ್ಯ ಹುಟ್ಟುತ್ತದೆ. ಗುಣವಿಲ್ಲದಿದ್ದರೆ ಪ್ರಾಮಾಣ್ಯ ಹುಟ್ಟುವುದಿಲ್ಲವೆನ್ನಬೇಕು. ಆದ್ದರಿಂದ ಯಾದೃಚ್ಛಿಕಸಂವಾದಿ - ಸ್ಥಳದಲ್ಲಿ ಗುಣವಿಲ್ಲದಿದ್ದರೂ ಪ್ರಾಮಾಣ್ಯ ಹುಟ್ಟುವುದು ಕಂಡಿದ್ದರಿಂದ ವ್ಯತಿರೇಕವ್ಯಭಿಚಾರ ಬರುತ್ತದೆ. ಆದ್ದರಿಂದ 'ಪ್ರಾಮಾಣ್ಯಮ್ ಸ್ವತಃ ಅಪ್ರಾಮಾಣ್ಯಮ್ ಪರತಃ' ಎಂಬ ನಿಯಮಕ್ಕೆ ಯಾವುದೇ ದೋಷವಿರುವುದಿಲ್ಲ.

ಮೂರು ವಿಕಲ್ಪಗಳು

**भावदीपः – प्रमेति** ।। अत्र प्रमात्वतदाश्रयतत्सम्बन्धानामन्यतमस्यैतत् साध्यते । त्रयाणां विशेषणविशेष्यभावापत्त्या विशिष्टस्य वेति विकल्प्याऽद्येऽपि कस्येति विकल्प्य दोषमाह – **प्रमात्वस्येति** ।।

ಪ್ರಮಾತ್ವವನ್ನು ಅಥವಾ ಪ್ರಮಾತ್ವಕ್ಕೆ ಆಶ್ರಯವಾದದ್ದನ್ನು ಹಾಗೂ ಅವುಗಳಿಗಿರುವ ಸಂಬಂಧವನ್ನು ಸಾಧನೆ ಮಾಡುವುದಾದರೆ ಎಂದು 'ಪ್ರಮಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈ ಮೂರೂ ಸಹ ವಿಶೇಷಣ ವಿಶೇಷ್ಯಭಾವವನ್ನು ಹೊಂದುವುದರಿಂದ ಅಥವಾ ವಿಶಿಷ್ಟವಾಗುವುದರಿಂದಲೂ ಎಂದು ವಿಕಲ್ಪ ಮಾಡಿ, ಪ್ರಥಮಪಕ್ಷದಲ್ಲಿ ಯಾವುದಕ್ಕೆ ಎಂದು ವಿಕಲ್ಪ ಮಾಡಿ, ದೋಷವನ್ನು ಹೇಳುತ್ತಿದ್ದಾರೆ 'ಪ್ರಮಾತ್ವಸ್ಯ' ಇತ್ಯಾದಿಯಾಗಿ.

ಜ್ಞಾನಕಾರಣಮಾತ್ರಜನ್ಯತ್ವವು ಸಾಧ್ಯವೋ,
ಜ್ಞಾನಕಾರಣಜನ್ಯತ್ವೇ ಸತಿ ಅತಿರಿಕ್ತಕಾರಣಜನ್ಯತ್ವಮ್ ಎಂಬುದು ಸಾಧ್ಯವೋ ?

**भावदीपः – द्वितीयं शङ्कते – प्रमात्वेति** ।। किं ज्ञानकारणातिरिक्तमात्र जन्यत्वं साध्यम्? किं वा ज्ञानत्वप्रयोजककारणजन्यत्वे सत्यतिरिक्त-कारणजन्यत्वम् । आद्ये आह – **तादृशेति** ।। **द्वितीयं शङ्कते – ज्ञानेति** ।।

ಎರಡನೆಯ ವಿಶಿಷ್ಟಪಕ್ಷವನ್ನು 'ಪ್ರಮಾತ್ವಯುಕ್ತ' ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಅಂದರೆ ಜ್ಞಾನಕಾರಣಾತಿರಿಕ್ತಮಾತ್ರ ಜನ್ಯತ್ವವು ಸಾಧ್ಯವಾಗಿದೆಯೋ, ಅಥವಾ 'ಜ್ಞಾನತ್ವಪ್ರಯೋಜಕ ಕಾರಣಜನ್ಯತ್ವೇ ಸತಿ ಅತಿರಿಕ್ತಕಾರಣಜನ್ಯತ್ವಮ್' ಎಂಬುದು ಸಾಧ್ಯವಾಗಿದೆಯೋ, ಪ್ರಥಮಪಕ್ಷದಲ್ಲಿ 'ತಾದೃಶಜ್ಞಾನಸ್ಯಾಪಿ' ಎಂಬುದರಿಂದ ಉತ್ತರಿಸಿದ್ದಾರೆ. ಎರಡನೆಯ ಪಕ್ಷವನ್ನು 'ಜ್ಞಾನಕಾರಣ' ಇತ್ಯಾದಿ ವಾಕ್ಯದಿಂದ ಆಶಂಕಿಸಿದ್ದಾರೆ.

### ಕಾರ್ಯತ್ವಹೇತುವಿಗೆ ವ್ಯಭಿಚಾರ

**भावदीपः – व्यभिचारात् कार्यत्वहेतोरित्यर्थः । बाधव्याहतिनिरासाय शङ्कते – ज्ञानकारणेति ।।**

'ವ್ಯಭಿಚಾರಾತ್' ಎಂದರೆ ಕಾರ್ಯತ್ವಹೇತುವಿಗೆ ವ್ಯಭಿಚಾರ ಬರುತ್ತದೆ ಎಂದರ್ಥ. ಬಾಧ ಮತ್ತು ವ್ಯಾಹತಿದೋಷಗಳನ್ನು ಪರಿಹರಿಸಲು ಶಂಕಿಸುತ್ತಿದ್ದಾರೆ 'ಜ್ಞಾನಕಾರಣ' ಇತ್ಯಾದಿ ವಾಕ್ಯದಿಂದ.

### ವ್ಯಾಘಾತದೋಷಕ್ಕೆ ಅವಕಾಶವಿಲ್ಲ

**भावदीपः – विशिष्टाभावश्च अतज्जन्यत्वेन वा तज्जन्यत्वेऽप्यधिक-जन्यत्वेन वा सर्वथैवाजन्यत्वेन वा त्रेधा घटते । दृष्टान्ते घटादावाद्यमादाय पक्षे द्वितीयमादाय ईश्वरज्ञाने त्वन्त्यपक्षमादाय पर्यवसानाद् इष्टसिद्धिव्याघातो नेश्वरज्ञाने बाधश्चेति भावः।**

ವಿಶಿಷ್ಟಾಭಾವವು ಅತಜ್ಜನ್ಯತ್ವದಿಂದ ಅಥವಾ ತಜ್ಜನ್ಯತ್ವೇಽಪ್ಯಧಿಕಜನ್ಯತ್ವದಿಂದ ಅಥವಾ ಸರ್ವಥೈವಾಜನ್ಯತ್ವದಿಂದ ಕೂಡುತ್ತದೆ. ದೃಷ್ಟಾಂತವಾದ ಘಟದಲ್ಲಿ ಮೊದಲನೆಯ ಪಕ್ಷವನ್ನು ಒಪ್ಪಿ, ಪಕ್ಷದಲ್ಲಿ ಎರಡನೆಯ ಪಕ್ಷವನ್ನು ಒಪ್ಪಿ, ಈಶ್ವರಜ್ಞಾನದಲ್ಲಿ ಮೂರನೆಯ ಪಕ್ಷವನ್ನು ಒಪ್ಪಿ, ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಆದ್ದರಿಂದ ವ್ಯಾಘಾತದೋಷವು ಬರುವುದಿಲ್ಲ. ಮತ್ತು ಈಶ್ವರಜ್ಞಾನದಲ್ಲಿ ಬಾಧದೋಷವೂ ಕೂಡ ಬರುವುದಿಲ್ಲವೆಂದು ತಿಳಿಯಬೇಕು.

### ಜ್ಞಾನದಲ್ಲಿಯೂ ಜ್ಞಾನಜನ್ಯಹೇತುಮಾತ್ರ ಜನ್ಯತ್ವವನ್ನು ಸಾಧನೆ ಮಾಡಬಹುದೇ ?

**भावदीपः – हेतुः कार्यत्वम् । ज्ञानव्यावृत्तिर्व्यर्था प्रमायामिव**

**तत्राप्युक्तसाधन-सम्भवादित्याह – ज्ञानेऽपीति ।। ननु ज्ञानेऽपि ज्ञानहेतुमात्रजन्यत्वाभावसाधने व्याघात इत्यत आह – विशिष्टेति ।।**

ಹೇತುವೆಂದರೆ 'ಕಾರ್ಯತ್ವ' ಎಂದರ್ಥ. ಜ್ಞಾನವನ್ನು ವ್ಯಾವೃತ್ತಿ ಮಾಡುವುದು ವ್ಯರ್ಥವಾಗಿದೆ. ಏಕೆಂದರೆ ಪ್ರಮಾದಲ್ಲಿ ಹೇಳಿದಂತೆ ಜ್ಞಾನದಲ್ಲಿಯೂ ಕೂಡ ಸಾಧಿಸಬಹುದು ಎಂದು 'ಜ್ಞಾನೇಽಪಿ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಜ್ಞಾನದಲ್ಲಿಯೂ ಜ್ಞಾನಹೇತುಮಾತ್ರಜನ್ಯತ್ವಾಭಾವವನ್ನು ಸಾಧನೆ ಮಾಡಿದರೆ ವ್ಯಾಘಾತ ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ 'ವಿಶಿಷ್ಟಾಭಾವವಿಕಲ್ಪೇನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಜ್ಞಾನದಲ್ಲಿಯೂ ಅಧಿಕಜನ್ಯತ್ವದ ಪರ್ಯವಸಾನ ಪ್ರಯುಕ್ತ ವ್ಯಾಘಾತವಿಲ್ಲ

**भावदीपः – यथा विशिष्टाभावः प्रमायामधिकजन्यत्वाभावेन पर्यवस्यतीति न व्याघात इत्युच्यते । तथा ज्ञानेऽप्यधिकजन्यत्वेन पर्यवसानोक्त्या व्याघातस्य समाधातुं शक्यत्वादित्यर्थः ।**

ಯಾವರೀತಿಯಾಗಿ ವಿಶಿಷ್ಟಾಭಾವವು ಯಥಾರ್ಥಜ್ಞಾನದಲ್ಲಿ ಅಧಿಕಜನ್ಯತ್ವಾಭಾವಪ್ರಯುಕ್ತವಾಗಿ ಪರ್ಯವಸಾನವಾಗುವುದರಿಂದ ವ್ಯಾಘಾತ ಬರುವುದಿಲ್ಲವೆಂದು ಹೇಳಲಾಗುತ್ತದೋ, ಅದರಂತೆ ಜ್ಞಾನದಲ್ಲಿಯೂ ಅಧಿಕಜನ್ಯತ್ವದಿಂದ ಪರ್ಯವಸಾನವಾಗುವ ಕಾರಣ ವ್ಯಾಘಾತದೋಷವು ಬರುವುದಿಲ್ಲವೆಂದು ಹೇಳಬಹುದು ಎಂದರ್ಥ.

ಯಾದೃಚ್ಛಿಕಸಂವಾದಿಸ್ಥಳದಲ್ಲಿ ಗುಣವ್ಯಭಿಚಾರಿಯು ಸಮಾನ

**भावदीपः** – भ्रमेऽपि धर्म्यंशे प्रमात्वस्य सत्त्वेन ज्ञानत्वसमनियतस्य प्रमात्वस्याधिकप्रयोज्यत्वे ज्ञानत्वेऽपि तथात्वस्य सम्भवात् । ज्ञानत्वं भ्रमे गुणव्यभिचारि चेत्, प्रमात्वमपि यादृच्छिकसंवादीति, तथेति सममिति भावः ।

ಭ್ರಮೆಯಲ್ಲಿಯೂ ಕೂಡ ಧರ್ಮಿಯ ಅಂಶದಲ್ಲಿ ಪ್ರಮಾತ್ವವಿರುವುದರಿಂದ ಜ್ಞಾನತ್ವಸಮನಿಯತವಾದ ಪ್ರಮಾತ್ವಕ್ಕೆ ಅಧಿಕಪ್ರಯೋಜ್ಯತ್ವವಿರುವುದಾದರೆ ಜ್ಞಾನತ್ವದಲ್ಲಿಯೂ ಕೂಡ ಅಧಿಕಪ್ರಯೋಜ್ಯತ್ವವಿರುತ್ತದೆ.

ಜ್ಞಾನತ್ವವು ಭ್ರಮದಲ್ಲಿ ಗುಣವ್ಯಭಿಚಾರಿಯಾಗಿದೆಯೆಂದರೆ ಪ್ರಮಾತ್ವವೂ ಕೂಡ ಯಾದೃಚ್ಛಿಕ ಸಂವಾದಿಸ್ಥಳದಲ್ಲಿ ಗುಣವ್ಯಭಿಚಾರಿಯಾಗಿದೆಯೆಂಬುದು ಸಮಾನವಾಗಿದೆಯೆಂದು ತಿಳಿಯಬೇಕು.

ಗುಣಪದದಿಂದ ಜ್ಞಾನಕಾರಣಾತಿರಿಕ್ತಕಾರಣವನ್ನು ವಿವಕ್ಷಿಸಬೇಕು

**भावदीपः –** व्याघातस्येत्युपलक्षण् । ईशज्ञाने बाधस्यापि समाधातुं शक्यत्वादित्यपि ध्येयम् ।। **प्रतिज्ञेति** ।। परेणापि गुणत्वजातेरनङ्गीकारेण गुणपदेन ज्ञानकारणातिरिक्तकारणस्यैव वाच्यत्वेन पूर्वोक्तव्याघाताद्यापत्तेरित्यर्थः । हेतुं च निराह – **किञ्चेति** ।। व्यभिचाराद् दण्डरूपादौ घटं प्रति कारणत्वाभावादित्यर्थः ।

'ವ್ಯಾಘಾತಸ್ಯ' ಎಂಬುದು ಉಪಲಕ್ಷಣವಾಗಿದೆ. ಈಶಜ್ಞಾನದಲ್ಲಿ ಬರುವಂತಹ ಬಾಧವೂ ಕೂಡ ಪರಿಹಾರವಾಗುತ್ತದೆಂಬುದನ್ನೂ ಕೂಡ ತಿಳಿದುಕೊಳ್ಳಬೇಕು. 'ಪ್ರತಿಜ್ಞಾನಿರಾಸೇನ' ಎಂಬುದರ ಅಭಿಪ್ರಾಯ ಹೀಗಿದೆ - ಪರರೂ ಸಹ ಗುಣತ್ವಜಾತಿಯನ್ನು ಅಂಗೀಕಾರ ಮಾಡದ ಕಾರಣ ಗುಣಪದದಿಂದ ಜ್ಞಾನಕಾರಣಾತಿರಿಕ್ತಕಾರಣವನ್ನೇ ವಿವಕ್ಷಿಸಬೇಕು. ಆದ್ದರಿಂದ ಹಿಂದೆ ಹೇಳಿದ ವ್ಯಾಘಾತಾದಿದೋಷಗಳು ಪುನಃ ಬರುತ್ತವೆಂದು ಅಭಿಪ್ರಾಯ. ಹೇತುವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ. 'ವ್ಯಭಿಚಾರಾತ್' ಎಂದರೆ ದಂಡರೂಪದಲ್ಲಿ ಘಟಕ್ಕೆ ಕಾರಣತ್ವವು ಇರುವುದಿಲ್ಲ ಎಂದರ್ಥ.

ಉಭಯಕಾರಣತ್ವೇ ಎಂದರೇನು ?

**भावदीपः –** 'तस्माद् गुणेभ्यो दोषाणामभावस्तदभावतः । अप्रामाण्यादयो भावास्तेनोत्सर्गोऽनयोदितः ।।' इत्युक्त्यनुरोधेनाहऽह – **दोषनिरासेति** ।। **उभयेति** ।। प्रामाण्यजननदोषनिरासरूपोभयेत्यर्थः ।।

'ತಸ್ಮಾತ್ ಗುಣೇಭ್ಯೋ ದೋಷಾಣಾಮಭಾವಸ್ತದಭಾವತಃ।
ಅಪ್ರಾಮಾಣ್ಯಾದಯೋ ಭಾವಾಸ್ತೇನೋತ್ಸರ್ಗೋಽನಯೋದಿತಃ॥'

ಎಂಬ ವಚನಕ್ಕೆ ಅನುಸಾರಿಯಾಗಿ 'ದೋಷನಿರಾಸೋಪಕ್ಷಿಣತ್ವಾತ್' ಎಂದು ಹೇಳಿದ್ದಾರೆ. 'ಉಭಯಕಾರಣತ್ವೇ' ಎಂದರೆ ಪ್ರಾಮಾಣ್ಯಜನನ ಹಾಗೂ ದೋಷನಿರಾಸವೆಂಬ ಎರಡು ಕಾರಣಗಳಿದ್ದಾಗ ಎಂದರ್ಥ.

ಜ್ಞಾನಕಾರಣಮಾತ್ರಜನ್ಯತ್ವರೂಪವಾದ ಸ್ವತಸ್ತ್ವ

**भावदीपः – नचैवमिति** ।। गुणानां दोषनिरासोपक्षीणत्वे दोषाणामपि गुणनिरासोपक्षीणत्वसम्भवात् ज्ञानकारणमात्रजन्यत्वरूपं स्वतस्त्वं स्यादित्यर्थः ।।

'ನಚೈವಮ್' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಗುಣಗಳು ದೋಷನಿರಾಸ ಮಾಡುವುದರಲ್ಲಿ ಉಪಕ್ಷೀಣವಾಗಿದ್ದರೆ, ದೋಷಗಳೂ ಸಹ ಗುಣಗಳನ್ನು ನಿರಾಸ ಮಾಡುವುದರಲ್ಲಿ ಉಪಕ್ಷೀಣವಾಗಿವೆ. ಆದ್ದರಿಂದ ಜ್ಞಾನಕಾರಣಮಾತ್ರಜನ್ಯತ್ವರೂಪವಾದ ಸ್ವತಸ್ತ್ವವು ಯುಕ್ತವಾಗುತ್ತದೆಂದರ್ಥ.

ಯಾದೃಚ್ಛಿಸಂವಾದಿಸ್ಥಳದಲ್ಲಿ ಏಕೆ ಅಪ್ರಾಮಾಣ್ಯಬುದ್ಧಿಯಿಲ್ಲ

**भावदीपः – दोषान्वयेति** ।। दोषे सत्येवाप्रामाण्यम्, तदभावे तदभाव इत्यन्वयव्यतिरेकनियमेनेत्यर्थः । यादृच्छिकसंवादिनि सत्यपि दोषेऽप्रामाण्यानुत्पत्तिस्तु विषयसत्त्वादेर्दोषप्रतिबन्धकस्यसत्त्वादिति भावः ।।

'ದೋಷಾನ್ವಯವ್ಯತಿರೇಕನಿಯಮೇನ' ಎಂದರೆ ದೋಷವಿದ್ದರೆ ಅಪ್ರಾಮಾಣ್ಯವಿರುತ್ತದೆ. ದೋಷ-ವಿಲ್ಲದಿದ್ದರೆ ಅಪ್ರಾಮಾಣ್ಯವಿರುವುದಿಲ್ಲವೆಂಬ ಅನ್ವಯವ್ಯತಿರೇಕನಿಯಮವಿರುವುದರಿಂದ ಎಂದರ್ಥ. ಯಾದೃಚ್ಛಿಕಸಂವಾದಿಸ್ಥಳದಲ್ಲಿ ದೋಷವಿದ್ದರೂ ಕೂಡ ಅಪ್ರಾಮಾಣ್ಯಬುದ್ಧಿಯು ಏಕೆ ಹುಟ್ಟುತ್ತಿಲ್ಲ? ಎಂದರೆ. ವಿಷಯವಿರುವ ಪ್ರಯುಕ್ತ ದೋಷಪ್ರತಿಬಂಧಕವು ಇರುತ್ತದೆಂದು ತಿಳಿಯಬೇಕು.

'ಗುಣಾಸ್ತ್ವಕಿಂಚಿತ್ಕರಾಃ'

**भावदीपः – उभयेति** ।। 'गुणास्त्वकिञ्चित्कराः' इति पद्धत्युक्त्या दोषाणां गुणनिरासकत्वेऽपि न हानिस्तथाप्यभ्युपगमोक्तिरियम् ।। व्यभिचारादिति ।। गुणाभावेऽपि प्रमाया जायमानत्वादिति भावः ।

'ಉಭಯಕಾರಣತ್ವೇ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ಗುಣಾಸ್ತ್ವಕಿಂಚಿತ್ಕರಾಃ' ಎಂಬುದಾಗಿ ಪ್ರಮಾಣಪದ್ಧತಿಯಲ್ಲಿ ಹೇಳಿದಂತೆ ದೋಷಗಳು ಗುಣವನ್ನು ನಿರಾಸ ಮಾಡಿದರೂ

ಯಾವುದೇ ಹಾನಿಯಿರುವುದಿಲ್ಲ. ಆದರೂ ಸಹ ಅಭ್ಯುಪಗಮವಾದದಿಂದ ಹೀಗೆ ಹೇಳಿದ್ದಾರೆಂದು ತಿಳಿಯಬೇಕು. 'ವ್ಯಭಿಚಾರಾತ್' ಎಂದರೆ ಗುಣವಿಲ್ಲದಿದ್ದರೂ ಯಥಾರ್ಥಜ್ಞಾನವು ಹುಟ್ಟುವುದರಿಂದ ಎಂದಭಿಪ್ರಾಯ.

### ವಿಷಯದ ಇರುವಿಕೆಯೇ ಗುಣವಲ್ಲ

**भावदीपः –** तत्र विषयसत्त्वादिकमेव गुण इति त्वन्यत्र निरस्तं बोध्यम्। अभ्युपेत्य वादेनाऽह – **दोषाभावस्येति** ।। कारणतावच्छेदकप्रतिबन्धकाभावसाधारणप्रयोजकत्वमात्राभिप्रयेण वा कारणत्वोक्तिः । अन्यथा प्रागुक्ततत्त्वनिर्णयटीका-सुधावाक्याभ्यां विरोधापातात् ।

ವಿಷಯದ ಇರುವಿಕೆಯೇ ಗುಣವೆಂಬುದನ್ನು ಬೇರೆಕಡೆ ನಿರಾಕರಣೆ ಮಾಡಲಾಗಿದೆ. ಅಂಗೀಕಾರವಾದದಿಂದ ಹೇಳುತ್ತಿದ್ದಾರೆ 'ದೋಷಾಭಾವಸ್ಯ' ಇತ್ಯಾದಿಯಾಗಿ. ಕಾರಣತಾವಚ್ಛೇದಕಪ್ರತಿಬಂಧಕಾಭಾವಸಾಧಾರಣಪ್ರಯೋಜಕತ್ವಮಾತ್ರದ ಅಭಿಪ್ರಾಯದಿಂದ ಕಾರಣತ್ವವನ್ನು ಹೇಳಲಾಗಿದೆ. ಇಲ್ಲದಿದ್ದರೆ ಹಿಂದೆ ತತ್ವನಿರ್ಣಯಟೀಕೆ ಹಾಗೂ ಸುಧಾವಾಕ್ಯಗಳ ವಿರೋಧ ಬರುತ್ತದೆ.

### ಪ್ರಾಮಾಣ್ಯ ಸ್ವತಸ್ತ್ವಕ್ಕೆ ಭಂಗವಿಲ್ಲ

**भावदीपः –** नच स्वतस्त्वभङ्गः । ज्ञानजननशक्तिवत् प्रमाजननशक्तेः सहजत्वमात्रेण स्वतस्त्वोपपत्तेः । अप्रामाण्यं तु दोषाहितशक्त्येति वैषम्यम् । उक्तञ्च प्रथमपादीयसुधायाम् – **इन्द्रियादीनामौत्सर्गिकी** शक्तिः प्रामाण्यजनने दोषापवादादप्रामाण्यमुपजनयतीति । व्यतिरेकिणमाशङ्कते – **प्रमेति** ।।

ಹೀಗೆ ಹೇಳಿದರೆ ಪ್ರಮಾಣಸ್ವತಸ್ತ್ವಕ್ಕೆ ಭಂಗವಿಲ್ಲ. ಏಕೆಂದರೆ ಜ್ಞಾನಜನನಶಕ್ತಿಯಂತೆ ಪ್ರಮಾಜನನ ಶಕ್ತಿಯೂ ಕೂಡ ಸಹಜವೆಂದು ಹೇಳಿದ್ದರಿಂದ ಪ್ರಾಮಾಣಸ್ವತಸ್ತ್ವವು ಯುಕ್ತವಾಗುತ್ತದೆ. ಅಪ್ರಾಮಾಣ್ಯವಾದರೂ ಆಹಿತವಾದ ದೋಷದಿಂದ ಬರುತ್ತದಾದ್ದರಿಂದ, 'ಪರತಃ' ಎಂದು ಹೇಳಬೇಕು. ಪ್ರಥಮಪಾದದ ಸುಧೆಯಲ್ಲಿ ಇಂದ್ರಿಯಗಳಿಗೆ ಔತ್ಸರ್ಗಿಕವಾದ ಶಕ್ತಿಯಿದೆ. ಪ್ರಾಮಾಣ್ಯವನ್ನು ಹುಟ್ಟಿಸುವಾಗ ಔತ್ಸರ್ಗಿಕವಾದ ಶಕ್ತಿಯಿರುತ್ತದೆ. ದೋಷ ಅಪವಾದಗಳಿಂದ ಅಪ್ರಾಮಾಣ್ಯವನ್ನು ಹುಟ್ಟಿಸುತ್ತದೆಂದು ಹೇಳಲಾಗಿದೆ. ವ್ಯತಿರೇಕಿಯನ್ನು ಆಶಂಕಿಸುತ್ತಿದ್ದಾರೆ 'ಪ್ರಮಾ' ಇತ್ಯಾದಿಯಾಗಿ.

ಗುಣಜನ್ಯವೆಂಬ ವಿಷಯದಲ್ಲಿ ಆಧಾರವಿಲ್ಲ

**भावदीपः – अजन्यप्रमात्वमिति** ।। जन्यप्रमात्वाभाव इत्यर्थः ।। **व्याप्तीति** ।। यादृच्छिकसंवादिदुष्टवाक्यजन्यप्रमायां साध्ये सत्युपाध्यभावादित्यर्थः । अतो गुणजन्यत्वे मानाभावात् तदजन्यत्वे मानाभावाच्चेत्यर्थः ।।

'ಅಜನ್ಯಪ್ರಮಾತ್ವಮ್' ಎಂದರೆ 'ಜನ್ಯಪ್ರಮಾತ್ವಾಭಾವ' ಎಂದರ್ಥ. ಯಾದೃಚ್ಛಿಕಸಂವಾದಿಯಾದ ದುಷ್ಟವಾಕ್ಯಜನ್ಯಪ್ರಮಾದಲ್ಲಿ ಸಾಧ್ಯವಿದ್ದರೂ ಉಪಾಧಿಯಿರುವುದಿಲ್ಲವೆಂದು ವ್ಯಾಪ್ತಿ ಇತ್ಯಾದಿಯಾಗಿ ಹೇಳಿದ್ದಾರೆ. ಆದ್ದರಿಂದ ಗುಣಜನ್ಯವೆಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಗುಣಜನ್ಯವಲ್ಲವೆಂಬ ವಿಷಯದಲ್ಲಿ ಪ್ರಮಾಣವಿರುತ್ತದೆಂದು ಪ್ರಮಾಣಸ್ವತಸ್ತ್ವವು ಸಿದ್ಧವಾಗುತ್ತದೆ.

'ಕರ್ಮಣಿ' ಎಂಬ ಶಬ್ದವು ಉಪಲಕ್ಷಣಯಾ ಗ್ರಾಹ್ಯ

**भावदीपः –** भाष्ये देवानामनादिनित्यत्वादित्यनुक्त्वानित्यत्वादित्युक्तेर भिप्रायं व्यञ्जयितुमाह – **नच वाच्यमिति** ।। **प्रमाणेति** ।। 'ते ह नाकम्' इति प्रमाणेत्यर्थः।। **अतीतेति**।। शब्दे कर्मणि चोभयत्रेत्यर्थः । तथाच पूर्वत्र **'कर्मणि'** इति शब्दे इत्यस्याप्युपलक्षणमिति भावः ।।

ಭಾಷ್ಯದಲ್ಲಿ ದೇವತೆಗಳು ಅನಾದಿನಿತ್ಯರಾಗಿದ್ದರೆಂದು ಹೇಳದೆ ಅನಿತ್ಯರಾಗಿದ್ದಾರೆಂದು ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಸ್ಪಷ್ಟಪಡಿಸಲು 'ನಚವಾಚ್ಯಮ್' ಎಂಬ ವಾಕ್ಯವು ಹೊರಟಿದೆ. ಪ್ರಮಾಣವೆಂದರೆ 'ತೇ ಹ ನಾಕಮ್' ಎಂಬ ಪ್ರಮಾಣವೆಂದರ್ಥ. 'ಅತೀತದೇವತಾಪ್ರವಾಹ' ಎಂದರೆ 'ಶಬ್ದೇ' 'ಕರ್ಮಣಿ' ಎಂಬೆರಡು ಸೂತ್ರಗಳಲ್ಲಿ ಹೇಳಿದಂತೆ ದೇವತೆಗಳ ಪ್ರವಾಹವು ಅನಾದಿನಿತ್ಯವಾಗಿದೆಯೆಂದು ತಿಳಿಯಬೇಕು. ಆದ್ದರಿಂದ ಹಿಂದಿನ ಸೂತ್ರದಲ್ಲಿ 'ಕರ್ಮಣಿ' ಎಂಬ ಶಬ್ದವನ್ನು ಉಪಲಕ್ಷಣಯಾ ತಿಳಿಯಬೇಕು.

'ದೇವತಾಹ್ವಾನ' ಎಂದರೇನು ?

**भावदीपः – कर्मण्यपि साम्यादिति** ।। शब्द इति सूत्रे कर्मणि चेत्यनुवर्त्यं वा उपलक्ष्यं वेति भावः ।। **देवताह्वानेति** ।। 'इन्द्रागच्छ हरिर्वा आगच्छ' इत्यादिरूपस्येत्यर्थः । नेति नञा निषेध्यं दर्शयन् तेषां प्रभवनियमादिति

**भाष्यं व्याचष्टे – यदिति ।। न तस्याप्रामाण्यमिति ।। विरोध इति पदं नञाऽन्वेतीति सूचितम् । सूर्येत्यादिभाष्यं व्याचष्टे – नच तत्रेति ।।**

'ಕರ್ಮಣ್ಯಪಿ ಸಾಮ್ಯಾತ್' ಎಂದರೆ 'ಶಬ್ದೇ' ಎಂಬ ಸೂತ್ರದಲ್ಲಿ 'ಕರ್ಮಣಿಚ' ಎಂಬುದನ್ನು ಅನುವೃತ್ತಿಮಾಡಿಕೊಳ್ಳಬೇಕು. ಅಥವಾ ಉಪಲಕ್ಷಣಯಾ ಇಟ್ಟುಕೊಳ್ಳಬೇಕು ಎಂದಭಿಪ್ರಾಯ. ದೇವತಾಹ್ವಾನವೆಂದರೆ 'ಎಲೈ ! ಇಂದ್ರನೇ ಬಾ' ಇತ್ಯಾದಿ ರೂಪವಾದ ದೇವತಾಹ್ವಾನರೂಪವಾದ ವಾಕ್ಯವೆಂದರ್ಥ. 'ನ' ಎಂಬಲ್ಲಿರುವ 'ನಞ್' ಎಂಬುದು ನಿಷೇಧ್ಯವನ್ನು ತೋರಿಸುತ್ತಿದೆಯೆಂದು ವ್ಯಾಖ್ಯಾನ ಮಾಡುತ್ತಾ 'ತೇಷಾಂ ಪ್ರಭವನಿಯಮಾತ್' ಎಂಬ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಯತ್' ಇತ್ಯಾದಿಯಾಗಿ. 'ನ ತಸ್ಯಾಪ್ರಾಮಾಣ್ಯಮ್' ಎಂದರೆ 'ವಿರೋಧೇ' ಎಂಬ ಪದವನ್ನು 'ನಞ್' ಎಂಬುದರ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು ಎಂದು ಸೂಚಿಸಿದ್ದಾರೆ. 'ಸೂರ್ಯ' ಇತ್ಯಾದಿ ಭಾಷ್ಯವನ್ನು 'ನಚ ತತ್ರ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

ಹಿಂದಿನ ಕಲ್ಪದಲ್ಲಿರುವ ದೇವತೆಗಳನ್ನೇ ಪುನಃ ಹುಟ್ಟಿಸುತ್ತಾನೆಯೇ ?

**भावदीपः – तथैवेति ।। वचनोक्तेरुपयोगं वक्तुमाह – नच वाच्यं श्रुताविति ।। तामेव सूर्यादिव्यक्तिं पूर्वप्रकारेणाकल्पयदित्यादिरूपेणेत्यर्थः। यथर्तुष्विति सम्भवपर्वण्याद्येऽध्याये सौतिवचनम् । यथेत्यादेरुपयोगम् इतरेषामिति पदार्थं वदन्नाह – नचायोगिनामिति ।।**

'ತಥೈವ' ವಚನದ ಉಕ್ತಿಗೆ ಉಪಯೋಗವನ್ನು ತೋರಿಸಲು 'ನಚ ವಾಚ್ಯಮ್' ಇತ್ಯಾದಿ ವಾಕ್ಯವು ಹೊರಟಿದೆ. ಹಿಂದಿನ ಕಲ್ಪದಲ್ಲಿರುವ ಸೂರ್ಯಾದಿವ್ಯಕ್ತಿಗಳನ್ನೇ ಪುನಃ ಸೃಷ್ಟಿಮಾಡಿದನು ಎಂಬುದಾಗಿ ಔಪಚಾರಿಕವಾಗಿ ಅರ್ಥವನ್ನು ತಿಳಿಯಬೇಕು. 'ಯಥರ್ತುಷ್ವಿತಿ' ಎಂಬ ಶ್ಲೋಕವು ಸಂಭವಪರ್ವದ ಪ್ರಥಮಾಧ್ಯಾಯದಲ್ಲಿ ಸೂತಪುರಾಣಿಕರು ಹೇಳುವ ವಚನವಾಗಿದೆ. 'ಯಥಾ' ಇತ್ಯಾದಿಯಾಗಿ ಹೇಳಿದ್ದರ ಉಪಯೋಗವನ್ನು 'ಇತರೇಷಾಮ್' ಎಂಬ ಪದದ ಅರ್ಥವನ್ನು 'ನಚ ಅಯೋಗಿನಾಂ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾ ಹೇಳುತ್ತಿದ್ದಾರೆ.

ಪ್ರಳಯ ಇದೆ ಎಂಬ ವಿಷಯದಲ್ಲಿ ಪ್ರಮಾಣ

**भावदीपः – परं प्रति अप्रलयवादिनं पूर्वपक्षिणं प्रति ।। प्रलयस्येति ।।**

'अपश्यमप्यये मायया यत्प्रयन्ति', 'आकाशं प्रत्यस्तं यन्ति', 'नासदासीन्नो सदासीत्तदानीम्', 'यमप्येति भुवनं य इदं सर्वं विलापयति', 'स रुद्रेण विलापयति', 'क्रमाद् विलीयते व्युत्क्रमाद्विलयश्चेत्यादिश्रुतिभिः 'ब्रह्मणा सह ते सर्वे सम्प्राप्ते प्रति सञ्चर' इति 'यस्मिंश्च प्रलयं यान्ति' इत्यादिस्मृतिभिस्सिद्धत्वादित्यर्थः ।।२८।।

'ಪರಂ ಪ್ರತಿ' ಎಂದರೆ ಪ್ರಳಯವಿಲ್ಲವೆಂದು ಹೇಳುವ ಪೂರ್ವಪಕ್ಷಿಯನ್ನು ಕುರಿತು ಎಂದರ್ಥ. 'ಪ್ರಳಯಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - 'ಅಪಶ್ಯಮಪ್ಯಯೇ ಮಾಯಯಾ ಯತ್ಪ್ರಯಂತಿ', 'ಆಕಾಶಂ ಪ್ರತ್ಯಸ್ತಂ ಯಂತಿ', 'ನಾಸದಾಸೀನ್ನೋ ಸದಾಸೀತ್ತದಾನೀಮ್', 'ಯಮಪ್ಯೇತಿ ಭುವನಂ ಯ ಇದಂ ಸರ್ವಂ ವಿಲಾಪಯತಿ', 'ಸ ರುದ್ರೇಣ ವಿಲಾಪಯತಿ', 'ಕ್ರಮಾದ್ ವಿಲೀಯತೇ ವ್ಯುತ್ಕ್ರಮಾದ್ ವಿಲಯಶ್ಚ ಇವೇ ಮೊದಲಾದ ಶ್ರುತಿಗಳಿಂದ 'ಬ್ರಾಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿ ಸಂಚರ' 'ಯಸ್ಮಿಂಶ್ಚ ಪ್ರಳಯಂ ಯಾಂತಿ' ಇತ್ಯಾದಿ ಸ್ಮೃತಿಗಳಿಂದಲೂ ಪ್ರಳಯದ ಇರುವಿಕೆಯು ಸಿದ್ಧವಾಗಿದೆ ಎಂದರ್ಥ.

## ಬ್ರಹ್ಮಸೂತ್ರ

### 'ಅತ ಏವ ಚ ನಿತ್ಯತ್ವಮ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। अत एव च नित्यत्वम् ।। २९ ।।**

ಸೂತ್ರಾರ್ಥ - ದೇವತಾಪ್ರವಾಹವು ಅನಿತ್ಯವಾದರೆ ವೇದಗಳ ನಿತ್ಯತ್ವವು ಸಿದ್ಧವಾಗುವುದಿಲ್ಲ, ಹೀಗೆ ವೇದ ನಿತ್ಯತ್ವದ ಅನ್ಯಥಾ ಉಪಪತ್ತಿಯಿಂದ ದೇವತಾಪ್ರವಾಹಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ.

ಅರ್ಥ -- ಅತ ಏವಚ = ವೇದವು ನಿತ್ಯವಾದ್ದರಿಂದಲೇ ದೇವತಾ ಪ್ರವಾಹಕ್ಕೂಸಹ, ನಿತ್ಯತ್ವಮ್ = ನಿತ್ಯತ್ವವು ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರಭಾಷ್ಯ

### ವೇದ ನಿತ್ಯವಾದ್ದರಿಂದಲೇ ದೇವತಾಪ್ರವಾಹವೂ ನಿತ್ಯ

**ब्रह्मसूत्रभाष्यम् – अत एव शब्दस्य नित्यत्वादेव च देवप्रवाहनित्यत्वं युक्तम् ।।२९।।**

ಅನುವಾದ - ವೇದವು ನಿತ್ಯವಾದ ಕಾರಣದಿಂದಲೇ ದೇವತೆಗಳ ಪ್ರವಾಹವು ನಿತ್ಯವಾಗಿರುವುದು ಯುಕ್ತವಾಗಿದೆ.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ದೇವಪ್ರವಾಹಕ್ಕೆ ನಿತ್ಯತ್ವವನ್ನು ಸಮರ್ಥಿಸುವಂತಹ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. -

ಅತ ಏವ = ಸೂತ್ರದಲ್ಲಿರುವ, ಅತ ಏವ ಎಂಬ ಪದದಿಂದ ಶಬ್ದಸ್ಯ = ವೇದಕ್ಕೆ, ನಿತ್ಯತ್ವಾದೇವ = ನಿತ್ಯತ್ವ ಇರುವುದರಿಂದಲೂ, ದೇವಪ್ರವಾಹನಿತ್ಯತ್ವಮ್ = ದೇವತೆಗಳ ಪ್ರವಾಹವು ನಿತ್ಯವಾಗಿದೆ ಎಂಬುದು, ಯುಕ್ತಮ್ = ಪ್ರಮಿತವಾಗಿದೆ.

### ಸತ್ತರ್ಕದೀಪಾವಳಿ

**सत्तर्कदीपावळिः –**

**।। अत एव च नित्यत्वम् ।।**

**वैदिकेन्द्रादिना तदर्थप्रवाहोच्छेद इत्याह – अत इति ।। गतैर्देवैः समाननामरूपत्वाद् वर्तमानानां मुक्त्यनन्तरमपि अपुनरावृत्तावपि भविष्यद्देवेषु पूर्वेष्विव ब्रह्मरुद्रादिव्यवहाराविरोधः । तथाच श्रुतिः 'यथा पूर्वमकल्पयद्' इति ।।**

ವೇದಪ್ರತಿಪಾದ್ಯರಾದ ಇಂದ್ರಾದಿಗಳ ಪ್ರವಾಹವು ನಿತ್ಯವಾಗಿದೆ ಎಂದು ಸಮರ್ಥಿಸಲು 'ಅತ ಏವ' ಇತ್ಯಾದಿ ಭಾಷ್ಯವು ಹೊರಟಿದೆ. ಹಿಂದಿನ ಕಲ್ಪದಲ್ಲಿ ಯಾವ ದೇವತೆಗಳು ಇಂದ್ರ, ರುದ್ರ ಮೊದಲಾದ ನಾಮ-ರೂಪಗಳನ್ನು ಹೊಂದಿದ್ದರೂ, ಈ ಕಲ್ಪದಲ್ಲಿರುವ ಇಂದ್ರ-ರುದ್ರ ಮೊದಲಾದ ದೇವತೆಗಳೂ ಸಹ ಅದೇ ಹೆಸರನ್ನು ಪಡೆದಿರುತ್ತಾರೆ. ಆದ್ದರಿಂದ, ಹಿಂದಿನ ಕಲ್ಪದ ದೇವತೆಗಳಿಗೆ ಮೋಕ್ಷವಾದ ಮೇಲೆ ಪುನರಾವೃತ್ತಿ ಇಲ್ಲದಿದ್ದರೂ ಬಾಧಕವಿರುವುದಿಲ್ಲ. ಅಂದರೆ ಬ್ರಹ್ಮ-ರುದ್ರ-ಇಂದ್ರ ಮೊದಲಾದ ವ್ಯವಹಾರಗಳ ವಿರೋಧವು ಬರುವುದಿಲ್ಲ. ಈ ವಿಷಯದಲ್ಲಿ 'ಯಥಾಪೂರ್ವಮಕಲ್ಪಯತ್' ಎಂಬ ಶ್ರುತಿಯೇ ಆಧಾರವಾಗಿದೆ.

## ತತ್ವಪ್ರದೀಪ

### ವೇದನಿತ್ಯತ್ವಹೇತುವಿನಿಂದ ದೇವಪ್ರವಾಹನಿತ್ಯತ್ವಸಾಧನೆ

**तत्वप्रदीपः – अत एव नित्यत्वम् ।। अत एव शब्दस्य नित्यत्वहेतोरेव च देवप्रवाहनित्यत्वं सुसाधं भवति विनाऽपि हेत्वन्तरान्वेषणेन । यस्माद्धेतोः प्रामाण्यविरोध आशङ्क्यते । नह्यनित्यत्वे वाच्यस्य शब्दनित्यत्वं समञ्जसं स्यात् ।**

'ಅತ ಏವ ನಿತ್ಯತ್ವಮ್' ಎಂಬ ಸೂತ್ರದ ವ್ಯಾಖ್ಯಾನ ಹೀಗಿದೆ - ಅತ ಏವ = ಶಬ್ದವು ನಿತ್ಯವಾಗಿರುವ ಕಾರಣದಿಂದಲೇ, ನಿತ್ಯತ್ವಮ್ = ದೇವಪ್ರವಾಹವು ನಿತ್ಯವೆಂದು ಸಾಧಿಸಿ-ದಂತಾಗುತ್ತದೆ. ಇದಕ್ಕೆ ಮತ್ತೊಂದು ಹೇತುವಿನ ಅನ್ವೇಷಣೆ ಅನಗತ್ಯ.

ಯಾವ ಕಾರಣದಿಂದ ಪ್ರಾಮಾಣ್ಯವಿರೋಧವನ್ನು ಆಶಂಕಿಸಲಾಗುತ್ತದೋ, ಆ ಕಾರಣದಿಂದ ದೇವಪ್ರವಾಹನಿತ್ಯತ್ವವನ್ನು ಒಪ್ಪಬೇಕು. ಒಂದುವೇಳೆ ವಾಚ್ಯರಾದ ದೇವತೆಗಳು ಅನಿತ್ಯರಾದರೆ, ವಾಚಕವಾದ ಶಬ್ದವು ನಿತ್ಯವಾಗುವುದು ಸಮಂಜಸವಾಗುವುದಿಲ್ಲ.

### ಪದವಿಗಳಲ್ಲಿರುವ ದೇವತೆಗಳು ನಿತ್ಯರಲ್ಲ

**तत्वप्रदीपः – नच पदस्थानां देवादीनामेव नित्यत्वमाशङ्कनीयम् । अप्रलयप्रसङ्गात् । नच सर्गप्रलयाभावो वाच्यः । श्रुतिविरोधात् ।**

ಆಯಾ ಪದವಿಗಳಲ್ಲಿರುವ ದೇವತೆಗಳೇ ನಿತ್ಯರಾಗಿದ್ದಾರೆಂದು ಆಶಂಕಿಸಬಾರದು. ಹಾಗಾದಲ್ಲಿ ಪ್ರಳಯವೇ ಇಲ್ಲವೆಂದಾಗುತ್ತದೆ. ಸೃಷ್ಟಿ ಪ್ರಳಯಗಳೇ ಇಲ್ಲವೆಂದು ಹೇಳಬಾರದು. ಸೃಷ್ಟಿ, ಪ್ರಳಯಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗೆ ವಿರೋಧ ಬರುತ್ತದೆ.

### ಶ್ರುತಿಗಳು ಕೇವಲ ವಿಧಿಪರವೆಂಬ ಮೀಮಾಂಸಕಮತ ವಿಮರ್ಶೆ

**तत्वप्रदीपः – अथापि स्यात्, नालं श्रुतिः सृष्ट्यादिकं वेदादिकं च प्रमापयितुं, विधिपरत्वादिति । मा भूत्तर्ह्यग्निहोत्रं जुहोतीत्यादिवाक्यानामग्निहोत्रादिसिद्धार्थवाचकत्वम् । ततश्चाग्निहोत्रहोमादौ प्रमाणाभावाद्वैदिकक्रियालोपः प्रसज्येत ।**

ಮೀಮಾಂಸಕರು - 'ಸೃಷ್ಟಿಕಾಲದಲ್ಲಿ ವೇದಗಳಿವೆ', 'ಪ್ರಳಯಕಾಲದಲ್ಲೂ ವೇದಗಳಿವೆ' ಹೀಗೆ ಪ್ರಮಾತ್ಮಕಜ್ಞಾನವನ್ನು ಸೃಷ್ಟಿಸಲು ಶ್ರುತಿಯು ಸಮರ್ಥವಲ್ಲ. ಏಕೆಂದರೆ ಶ್ರುತಿಯು ಕೇವಲ ವಿಧಿಪರವಾಗಿದೆ. ಸೃಷ್ಟ್ಯಾದಿಗಳು ವಿಧಿರೂಪವಲ್ಲದ ಕಾರಣ ಶ್ರುತಿಯು ಇವುಗಳನ್ನು ಸಮರ್ಥನೆ ಮಾಡುವುದಿಲ್ಲ.

ತತ್ವವಾದಿಗಳು - ಶ್ರುತಿಯು ಕೇವಲ ವಿಧ್ಯರ್ಥಕದಲ್ಲಿಯೇ ಪ್ರಾಮಾಣ್ಯವನ್ನು ಹೊಂದಿದೆ ಎಂದು ಮೀಮಾಂಸಕರಾದ ನೀವು ಹೇಳುತ್ತಿರುವಿರಿ. ಹಾಗಾದರೆ 'ಅಗ್ನಿಹೋತ್ರಂ ಜುಹೋತಿ' ಇದೇ ಮೊದಲಾದ ವಾಕ್ಯಗಳಿಂದ ಅಗ್ನಿಹೋತ್ರಾದಿಗಳ ಸ್ವರೂಪವೇ ಸಿದ್ಧವಾಗದೇ ಇರಬೇಕಾದೀತು. ಆಗ ಅಗ್ನಿಹೋತ್ರಾದಿ ಹೋಮದಲ್ಲಿ ಪ್ರಮಾಣವೇ ಇಲ್ಲದಂತಾಯಿದ್ದಾರಿಂದ ವೈದಿಕಕ್ರಿಯೆಯೇ ಲೋಪವಾಗುವ ಪರಿಸ್ಥಿತಿ ಬರುತ್ತದೆ.

### ಸಿದ್ಧದಲ್ಲೇ ಶ್ರುತಿಗಳಿಗೆ ತಾತ್ಪರ್ಯವೆಂದೇಕೆ ಹೇಳಬಾರದು ?

**तत्वप्रदीपः – नाग्निहोत्रादिसिद्धे तात्पर्यं कार्य एवेति वदतस्तद्विपरीतमेवोत्तरं स्यात् । तथा सति क्रियालोपः स्यादिति चेन्नैवम् । उच्छ्वासादिक्रियाकरणात् ।**

ಮೀಮಾಂಸಕರು - ಅಗ್ನಿಹೋತ್ರಾದಿ ಸಿದ್ಧ ವಿಷಯದಲ್ಲಿ ಶ್ರುತಿಗೆ ತಾತ್ಪರ್ಯ ಇರುವುದೇ ಇಲ್ಲ. ಅಗ್ನಿಹೋತ್ರಾದಿ ಕಾರ್ಯದಲ್ಲಿಯೇ ಶ್ರುತಿಗೆ ತಾತ್ಪರ್ಯ ಇರುತ್ತದೆ.

ತತ್ವವಾದಿಗಳು - ವಿಪರೀತವಾಗಿ ನಾವು ಹೇಳುತ್ತೇವೆ. ಶ್ರುತಿಗೆ ಸಿದ್ಧದಲ್ಲಿಯೇ ತಾತ್ಪರ್ಯ ಕಾರ್ಯದಲ್ಲಲ್ಲ ಎಂದು.

ಮೀಮಾಂಸಕರು - ಹಾಗಾದರೆ ಎಲ್ಲಾ ಕ್ರಿಯೆಗಳು ಲೋಪವಾಗಲಿ ?

ತತ್ವವಾದಿಗಳು - ಇದು ತಪ್ಪು. ಶ್ವಾಸೋಛ್ವಾಸ, ಗಮನಾಗಮನ ಮೊದಲಾದ ಕ್ರಿಯೆಗಳನ್ನು ನಾವು ಮಾಡುತ್ತಿದ್ದೇವೆ. ಇವುಗಳ ಲೋಪ ಹೇಗೆ ತಾನೆ ಬರುತ್ತದೆ ?

### ಚಂಡಮತಿಗಳು ಚಂಡಾಲನಿಗೆ ಯಜ್ಞಾಧಿಕಾರ ನೀಡಿದರು

**ತत्वप्रदीपः – विहितक्रियालोपः स्यादित्युक्तमिति चेत्, कस्य विहिता क्रिया? ब्राह्मणो यजेतेत्यादौ विहिता हि ब्राह्मणादिवर्णाश्रमिणामिति चेन्न । यजनविधिमात्रपरस्य वाक्यस्य ब्राह्मणादावमानत्वात् । अतश्चायं चण्डमतिश्च ण्डालादेर्यज्ञाधिकारमप्यनुजज्ञिवान् ।**

ಮೀಮಾಂಸಕರು - ಕ್ರಿಯೆ ಲೋಪವಾಗಲಿ ಎಂದರೆ ವಿಹಿತವಾದ ಕ್ರಿಯೆಯು ಲೋಪವಾಗಲಿ ಎಂಬುದು ಆಕ್ಷೇಪದ ಅಭಿಪ್ರಾಯ.

ತತ್ವವಾದಿಗಳು - ಕ್ರಿಯಾವಿಧಾನವು ಯಾರನ್ನು ಕುರಿತು ? ಎಂಬ ಪ್ರಶ್ನೆಗೆ ನೀವು ಉತ್ತರಿಸಬೇಕು.

ಮೀಮಾಂಸಕರು - 'ಬ್ರಾಹ್ಮಣೋ ಯಜೇತ' ಇತ್ಯಾದಿ ಶ್ರುತಿಗಳಲ್ಲಿ ಬ್ರಾಹ್ಮಣ ಮೊದಲಾದ ವರ್ಣಾಶ್ರಮವುಳ್ಳ ದ್ವಿಜರಿಗೆ ಮಾತ್ರ ವಿಹಿತಕ್ರಿಯೆಯ ವಿಧಾನವೆಂದು ಉತ್ತರಿಸುತ್ತೇವೆ.

ತತ್ವವಾದಿಗಳು - ಯಜನವಿಧಿವಾಕ್ಯಗಳು ಯಜ್ಞದ ವಿಧಿಯನ್ನಷ್ಟೇ ವಿಧಿ ಮಾಡುತ್ತಿದೆ. ಬ್ರಾಹ್ಮಣಾದಿಗಳೇ ಯಜ್ಞ ಮಾಡಬೇಕೆಂದೇನೂ ಹೇಳುತ್ತಿಲ್ಲ. ಆದ್ದರಿಂದ ಬ್ರಾಹ್ಮಣಾದಿಗಳೇ

ಯಜನ ಮಾಡಬೇಕೆಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗದು. ಆದ್ದರಿಂದ ಈ ದುಷ್ಟಬುದ್ಧಿಯುಳ್ಳ ಮೀಮಾಂಸಕನು (ಚಂಡಮತಿಃ = ದುಷ್ಟಬುದ್ಧಿಯುಳ್ಳವನು) ಚಂಡಾಲಾದಿ-ಗಳಿಗೂ ಕೂಡ ಯಜ್ಞಾಧಿಕಾರವನ್ನು ನೀಡಿದನು.

ಮೀಮಾಂಸಕನ ವೇದತಾತ್ಪರ್ಯ ವಿಚಾರಾಕೌಶಲ್ಯದ ಪರಿಪಾಕ

**तत्वप्रदीपः – नचाग्निहोत्रमेव सायामादावेव हुतवह एव तत्तन्मन्त्रेणैवेत्थमेव होतव्यमिति नियमः । कस्यचित्कदाचित्कुहचिद्यथा-कथञ्चित्केनचित्करणस्य यज्ञत्वं स्यात् । अहो यथोद्गतस्य कर्मतत्व-मीमांसापरिखिन्नमनसो वेदतात्पर्यविचारणाकौशलपरिपाकः । उक्तं च ''यत्किञ्चित्करणस्यापि यज्ञतैवान्यथा भवेत्'' इति भगवतैवानुभाष्ये ।।**

ಮೀಮಾಂಸಕರು - 'ಅಗ್ನಿಹೋತ್ರವನ್ನು ಮಾಡಲೇಬೇಕು', 'ಸಾಯಂಕಾಲವೇ ಮಾಡಬೇಕು' 'ಪ್ರಾತಃಕಾಲದಲ್ಲೇ ಮಾಡಬೇಕು' 'ಇಂಥ ಮಂತ್ರಗಳಿಂದ ಮಾಡಬೇಕು', 'ಹೀಗೆ ಮಾಡಬೇಕು' ಎಂಬ ನಿಯಮವನ್ನೇಕೆ ಒಪ್ಪಬೇಕು ? ನಾವು ಆ ನಿಯಮವನ್ನು ಒಪ್ಪುವುದಿಲ್ಲ.

ತತ್ವವಾದಿಗಳು - ಹಾಗಾದರೆ ಯಾರು ಬೇಕಾದರೂ ಯಜ್ಞ ಮಾಡಬಹುದೆಂದಾಯಿತು. ಕಾಲನಿಯಮವಿಲ್ಲದೆ ಯಾವಾಗ ಬೇಕಾದರೂ ಮಾಡಬಹುದೆಂದಾಯಿತು. ಎಲ್ಲಿ ಬೇಕಾದರೂ, ಹೇಗೆ ಬೇಕಾದರೂ, ಯಾರಿಂದ ಬೇಕಾದರೂ ಯಜ್ಞ ಮಾಡಿಸಬಹುದು ಎಂದಂತಾಯಿತು. ಏನಾಶ್ಚರ್ಯ ! ಕರ್ಮತತ್ವದ ಮೀಮಾಂಸೆಯಿಂದ ದುಃಖಿತನಾದ ಮನಸ್ಸುಳ್ಳ ಮೀಮಾಂಸಕನ ವೇದತಾತ್ಪರ್ಯ ವಿಚಾರದ ಅಕೌಶಲ್ಯದ ಪರಿಪಾಕ ಎಷ್ಟು ಆಶ್ಚರ್ಯಕರ !

ಈ ಎಲ್ಲಾ ದೋಷವನ್ನು ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು 'ಯತ್ಕಿಂಚಿತ್ಕರಣಸ್ಯಾಪಿ ಯಜ್ಞತೈವಾನ್ಯಥಾ ಭವೇತ್' 'ಸಿದ್ಧಬೋಧಕತ್ವವನ್ನು ಒಪ್ಪದಿದ್ದರೆ ಮಾಡಿದ ಕಾರ್ಯಗಳೆಲ್ಲವೂ ಯಾಗವೆಂದಾಗಬೇಕಾದೀತು' ಎಂದು ಹೇಳಿದ್ದಾರೆ.

ಎದೆನೋವಿನಿಂದ ಕೆಮ್ಮುತ್ತಿರುವ ಮೀಮಾಂಸಕನ ಪರಿಸ್ಥಿತಿ ಶೋಚನೀಯ

**तत्वप्रदीपः – अथ मतं न यजिविधिमात्रपरं वाक्यं ब्रूमः, किन्तु द्रव्यकालकर्तृकरणादिकारकविशिष्टविधिपरं, अतो नोक्तदोष इति । तदपि हन्त**

**तापसस्य हृदयतापातिरेकादुत्कासितमिव । सिद्धान्विते लिङादिपदशक्ति-स्वीकारापत्तेः ।**

ಮೀಮಾಂಸಕರು - ವಾಕ್ಯವು ಕೇವಲ ಯಾಗವಿಧಿಯನ್ನು ಮಾಡುವ ತಾತ್ಪರ್ಯವನ್ನಷ್ಟೇ ಹೊಂದಿಲ್ಲ. ದ್ರವ್ಯ, ಕಾಲ, ಕರ್ತೃ, ಕರಣ ಮೊದಲಾದ ಕಾರಕಗಳಿಂದ ವಿಶಿಷ್ಟವಾದ ಯಾಗವಿಧ್ಯೆಯನ್ನು ಮಾಡುವುದರಲ್ಲಿ ತಾತ್ಪರ್ಯವನ್ನು ಹೊಂದಿದೆ. ಆದ್ದರಿಂದ ಯಾರು ಬೇಕಾದರೂ, ಎಲ್ಲಿ ಬೇಕಾದರೂ ಯಾಗ ಮಾಡಬೇಕಾದೀತು ಇತ್ಯಾದಿ ದೋಷಗಳಿಗೆ ಅವಕಾಶವಿಲ್ಲ.

ತತ್ವವಾದಿಗಳು - ಬಹಳ ಕಷ್ಟ. ಮೀಮಾಂಸಕನ ಶೋಚನೀಯ ಪರಿಸ್ಥಿತಿ ನೋಡಲಾಗದು. ಹೃದಯತಾಪದ ಅತಿರೇಕದಿಂದ ಕಫವನ್ನು ಕಾರುವಂತೆ ಇವನ ಪರಿಸ್ಥಿತಿಯೇ ಆಗಿದೆ. ಏಕೆಂದರೆ ಕಾರ್ಯದಲ್ಲಿಯೇ ತಾತ್ಪರ್ಯವೆಂದು ಹೇಳಲು ಹೊರಟ ಮೀಮಾಂಸಕನು ಈಗ ಸಿದ್ಧಾನ್ವಿತದಲ್ಲಿ ಲಿಙಾದಿ ಪದಗಳಿಗೆ ಶಕ್ತಿಯನ್ನು ಸ್ವೀಕಾರ ಮಾಡಿದಂತಾಯಿತು. ಆದ್ದರಿಂದ ಮೀಮಾಂಸಕರಿಗೆ ಅಪಸಿದ್ಧಾಂತದೋಷ ಬರುತ್ತದೆ.

ಕಠಿಣಪದಾರ್ಥ - ತಾಪಸಸ್ಯ = ಶೋಚನೀಯ ಪರಿಸ್ಥಿತಿಗೆ ಒಳಗಾದ, ಹೃದಯತಾಪಾತಿರೇಕಾತ್ = ಹೃದಯಬೇನೆಯ ಅತಿರೇಕದಿಂದ ಬಳಲಿ, ಉತ್ಕಾಸಿತಮಿವ = ಕಫದಿಂದ ಕೆಮ್ಮುವನಂತೆ.

ಸ್ವರ್ಗವೆಂಬ ಸಿದ್ಧಾರ್ಥವೇ ಮುಖ್ಯತಾತ್ಪರ್ಯವೆಂದು ಒಪ್ಪಿರಿ

**तत्वप्रदीपः – ननु यद्यपि विध्यर्थतया सिद्धवस्तुकथनं न निषिद्ध्यते । कार्य एव तात्पर्यं पर्यवसितम् । अतो माऽपसिद्धान्त इति चेन्मैवम् । स्वर्गाद्यनुभावार्थत्वात्क्रियाविधेः सिद्धपरत्वं क्रियावाचिनामपि किं न स्यात् ।**

ಮೀಮಾಂಸಕರು - ವಿಧಿಗೋಸ್ಕರ ಸಿದ್ಧವಸ್ತುವನ್ನು ಪ್ರತಿಪಾದನೆ ಮಾಡುವುದನ್ನು ನಾವು ನಿಷೇಧ ಮಾಡಿಯೇ ಇಲ್ಲ. (ವಿಧ್ಯರ್ಥತಯಾ = ವಿಧಿಯ ಶೇಷವಾಗಿ) ವೇದಗಳಿಗೆ ಕಾರ್ಯದಲ್ಲಿಯೇ ಮುಖ್ಯತಾತ್ಪರ್ಯ. ಆ ಕಾರ್ಯದ ಅಂಗಭೂತವಾಗಿ ಸಿದ್ಧವಸ್ತುವನ್ನೂ ಕೂಡ ಪ್ರತಿಪಾದನೆ ಮಾಡುತ್ತವೆ ಎಂದು ಹೇಳುತ್ತೇವೆ. ಆದ್ದರಿಂದ ನಮಗೆ ಅಪಸಿದ್ಧಾಂತದೋಷವನ್ನು ಹೇಗೆ ಹೇಳುವಿರಿ ?

ತತ್ವವಾದಿಗಳು - ಇದು ತಪ್ಪು. ಹಾಗಾದರೆ ಸಕಲ ಕ್ರಿಯೆಗಳ ವಿಧಿಯೂ ಕೂಡ ಸ್ವರ್ಗಾದಿಸುಖಗಳಿಗೋಸ್ಕರವೇ ಇರುತ್ತವೆ. ಆಗ ಕ್ರಿಯಾವಾಚಿಯಾದ ವಾಕ್ಯಗಳಿಗೆ ಸಿದ್ಧಾರ್ಥದಲ್ಲಿಯೇ ಮುಖ್ಯತಾತ್ಪರ್ಯವೆಂದೇಕೆ ಹೇಳಬಾರದು ?

ವಿವರಣೆ - ಮೀಮಾಂಸಕರು ಕಾರ್ಯದಲ್ಲಿಯೇ ಮುಖ್ಯತಾತ್ಪರ್ಯ, ಆದಕ್ಕೆ ಅಂಗಭೂತವಾಗಿ ಸಿದ್ಧದಲ್ಲಿ ತಾತ್ಪರ್ಯವನ್ನು ಒಪ್ಪುತ್ತೇವೆಂದು ಉತ್ತರಿಸಿದರು. ಅದಕ್ಕೆ ಪಂಡಿತಾಚಾರ್ಯರು ಬಹಳ ಅಪೂರ್ವವಾದ ಸ್ವರಸವಾದ ದೋಷವನ್ನು ಹೇಳುತ್ತಿದ್ದಾರೆ. ಕಾರ್ಯವೂ ಕೂಡ ಮುಖ್ಯವೆಂದು ನಿಮಗೆ ಹೇಳಲು ಆಗುವುದಿಲ್ಲ. ಏಕೆಂದರೆ ಅಂತಿಮವಾದ ಪ್ರಯೋಜನ ಸ್ವರ್ಗವೇ ಆಗಿದೆ. ಆ ಸ್ವರ್ಗವೆಂಬ ಪ್ರಯೋಜನಕ್ಕಾಗಿ ಯಜ್ಞಾದಿ ಕಾರ್ಯಗಳು ನಡೆಯುತ್ತಿವೆ. ಆದ್ದರಿಂದ ವೇದದ ಮುಖ್ಯತಾತ್ಪರ್ಯ ಸ್ವರ್ಗವೆಂಬ ಸಿದ್ಧವಿಷಯದಲ್ಲೇ ನೀವು ಹೇಳಬೇಕು. ಅವಾಂತರ ಪ್ರಯೋಜನವಾದ ಯಜ್ಞಾದಿ ಕ್ರಿಯೆಗಳೇ ಮುಖ್ಯತಾತ್ಪರ್ಯವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಮೀಮಾಂಸಕರಾದ ನೀವು ಕಾರ್ಯದಲ್ಲೇ ಮುಖ್ಯತಾತ್ಪರ್ಯ, ಸಿದ್ಧಾರ್ಥದಲ್ಲಿ ಅಲ್ಲವೆಂದು ಹೇಳಿದರೆ, ನಾವು ಸಿದ್ಧಾರ್ಥದಲ್ಲೇ ಮುಖ್ಯತಾತ್ಪರ್ಯ, ಕಾರ್ಯದಲ್ಲಿ ಅಲ್ಲವೆಂದು ಉತ್ತರಿಸುತ್ತೇವೆ.

ಅಥವಾ ಪ್ರತ್ಯವಾಯಪರಿಹಾರವೇ ಅಂತಿಮತಾತ್ಪರ್ಯವೆಂದು ಒಪ್ಪಿರಿ

**तत्वप्रदीपः – प्रयोजनानुद्देशेनाधिकारिणः कर्तव्यतामात्रविधि-परत्वाभ्युपगमे वेदस्य, तदादिष्टमकुर्वतः किं स्यात् । प्रत्यवायः स्यादिति चेत्, तत्परिजिहीर्षवस्तर्हि विहितमनुतिष्ठन्तीति तत्परिहारार्थता विधेरभ्युपगता।**

ಮೀಮಾಂಸಕರು - 'ಅಧಿಕಾರಿಯು ಪ್ರಯೋಜನವನ್ನು ಅಪೇಕ್ಷೆ ಪಡದೇ ಕರ್ತವ್ಯದಲ್ಲಿ ತೊಡಗಬೇಕು' ಎಂದು ವೇದಗಳು ವಿಧಿಸುತ್ತಿವೆ. ಆದ್ದರಿಂದ ಸ್ವರ್ಗವೆಂಬ ಸಿದ್ಧಾರ್ಥದಲ್ಲಿ ವೇದಕ್ಕೆ ತಾತ್ಪರ್ಯ ಹೇಳಲಾಗದು.

ತತ್ವವಾದಿಗಳು - ಹಾಗಾದರೆ ವೇದದ ಆದೇಶವನ್ನು ಪಾಲಿಸದವನಿಗೆ ಏನಾಗುತ್ತದೆ ? (ತದಾದಿಷ್ಟಮ್ = ವೇದದಲ್ಲಿ ಆದೇಶಿಸಿದ್ದನ್ನು, ಅಪೂರ್ವತಃ = ಆಚರಣೆ ಮಾಡದವನಿಗೆ)

ಮೀಮಾಂಸಕರು - ಪ್ರತ್ಯವಾಯ ಬರುತ್ತದೆ.

ತತ್ವವಾದಿಗಳು - ಹಾಗಾದರೆ ಪ್ರತ್ಯವಾಯವನ್ನು ಪರಿಹರಿಸಿಕೊಳುವ ಬಯಕೆಯುಳ್ಳವನು ವಿಹಿತವಾದದ್ದನ್ನು ಅನುಷ್ಠಾನ ಮಾಡುತ್ತಾನೆ ಎಂದು ಹೇಳಿದಂತಾಯಿತು. ಆಗ ವಿಧಿವಾಕ್ಯಕ್ಕೆ ಪ್ರತ್ಯವಾಯದ ಪರಿಹಾರದಲ್ಲಿ ತಾತ್ಪರ್ಯವೆಂದು ನೀವು ಒಪ್ಪಿದಿರಿ.

ವಿವರಣೆ - ಮೀಮಾಂಸಕರು ಸ್ವರ್ಗದಲ್ಲಿ ಮುಖ್ಯತಾತ್ಪರ್ಯವಲ್ಲವೆಂದು ಹೇಳಲು ಯಾಗಾದಿ ಕರ್ತವ್ಯತ್ವದಲ್ಲಷ್ಟೇ ಮುಖ್ಯತಾತ್ಪರ್ಯವೆಂದು ಒಪ್ಪಿದರು. ಆಗಲೂ ಕೂಡ ವೇದದ ಆದೇಶವನ್ನು ಪಾಲಿಸದೇ ಯಜ್ಞಾದಿಪ್ರಕ್ರಿಯೆಗಳಲ್ಲಿ ತೊಡಗದಿದ್ದರೆ ಪ್ರತ್ಯವಾಯ ಬರುತ್ತದೆ ಎಂದು ಮೀಮಾಂಸಕರು ಹೇಳಲೇಬೇಕು. ಆಗ ಯಾಗವೇ ಅಂತಿಮಪ್ರಯೋಜನವೆಂಬ ಮಾತು ಭಗ್ನವಾಯಿತು. ಯಾಗ ಮಾಡುವುದು ಪ್ರತ್ಯವಾಯದ ಪರಿಹಾರಕ್ಕಾಗಿ ಎಂದು ಹೇಳಿದ್ದರಿಂದ ಪ್ರತ್ಯವಾಯ ಪರಿಹಾರವೇ ಅಂತಿಮತಾತ್ಪರ್ಯವೆಂದು ಮೀಮಾಂಸಕರು ಒಪ್ಪಿದಂತಾಯಿತು.

ಅದರಂತೆ ದೇವತಾಸ್ವರೂಪವನ್ನೂ ಕೂಡ ಒಪ್ಪಿರಿ

**तत्वप्रदीपः – अतः सिद्धपरताऽपि पदानां बलादाश्रयणीया । तस्माच्छ्रुतिसिद्धं देवतादिकमपि नापलपनीयम् ।।**

ಆದ್ದರಿಂದ ಪದಗಳಿಗೆ ಸಿದ್ಧಪರತ್ವವನ್ನೂ ಕೂಡ ನೀವು ಅಂಗೀಕಾರ ಮಾಡಲೇ ಬೇಕು. ಹೀಗೆ ಒಪ್ಪಿದಾಗ ಶ್ರುತಿಸಿದ್ಧವಾದ ದೇವತಾದಿಗಳ ಸ್ವರೂಪವನ್ನೂ ಕೂಡ ನೀವು ಅಪಲಾಪ ಮಾಡಬಾರದು.

ವಿವರಣೆ - ಮೀಮಾಂಸಕರು ದೇವತಾಸ್ವರೂಪ, ಸೃಷ್ಟಿಸ್ವರೂಪ, ವೇದಸ್ವರೂಪ ಮೊದಲಾದವುಗಳನ್ನು ಅಪಲಾಪ ಮಾಡುತ್ತಾರೆ. ವೇದಗಳ ತಾತ್ಪರ್ಯ ಕಾರ್ಯದಲ್ಲೇ ಇರುವುದರಿಂದ ದೇವತಾದಿ ಸ್ವರೂಪವನ್ನು ವೇದವು ಪ್ರತಿಪಾದನೆ ಮಾಡುವುದಿಲ್ಲವೆಂಬುದು ಅವರ ಧೋರಣೆ. ಆದರೆ ಅಂತಿಮವಾಗಿ ಸ್ವರ್ಗ ಅಥವಾ ಪ್ರತ್ಯವಾಯ ಪರಿಹಾರ ಎಂಬ ಸಿದ್ಧಬೋಧಕತ್ವವನ್ನು ಒಪ್ಪುವುದು ಮೀಮಾಂಸಕರಿಗೆ ಅನಿವಾರ್ಯವಾದ್ದರಿಂದ ಪ್ರಕೃತ ದೇವತಾಸ್ವರೂಪ, ಸೃಷ್ಟಿಸ್ವರೂಪ ಮೊದಲಾದ ಸಿದ್ಧಬೋಧಕತ್ವವನ್ನೂ ಒಪ್ಪಬೇಕು. ಇದು ಮೀಮಾಂಸರಿಕೆ ಅನಿವಾರ್ಯ.

ಮೀಮಾಂಸಕರಿಗೆ ಜೈಮಿನಿಸೂತ್ರ ವಿರೋಧ

**तत्वप्रदीपः – ''आम्नायस्य क्रियार्थत्वादानर्थक्यमतदर्थानाम्'' इति**

**सूत्रविरोधश्च तत्पक्ष एव भवति । क्रियातिरिक्तस्य कस्यचित्कार्यस्य लिङाद्यर्थत्वाभ्युमगमात्।**

ತತ್ವವಾದಿಗಳು - 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್' 'ವೇದವು ಕ್ರಿಯೆಯಲ್ಲಿಯೇ ತಾತ್ಪರ್ಯವನ್ನು ಹೊಂದಿದೆ. ಕ್ರಿಯಾವಾಚಿಯಾಗದ ಅರ್ಥವಾದ ಮಂತ್ರ ಇತ್ಯಾದಿ ವಾಕ್ಯಗಳಿಗೆ ಮಂತ್ರಗಳು ವ್ಯರ್ಥ' ಎಂಬ ಸೂತ್ರದಿಂದ ಮೀಮಾಂಸಕರಿಗೆ ವಿರೋಧವು ಬರುತ್ತದೆ. ಏಕೆಂದರೆ ಕ್ರಿಯೆಗಿಂತ ಅತಿರಿಕ್ತವಾದ ಕಾರ್ಯವು ಲಿಜಾದ್ಯರ್ಥವೆಂದು ಮೀಮಾಂಸಕರು ಒಪ್ಪಿರುತ್ತಾರೆ.

ವಿವರಣೆ - 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್' ಎಂಬ ಜೈಮಿನಿಸೂತ್ರವು ಕ್ರಿಯಾವಾಚಕವಿದ್ದರೆ ಮಾತ್ರ ಪ್ರಾಮಾಣ್ಯ ಒಪ್ಪಬೇಕು. ಕ್ರಿಯಾವಾಚಕವಿಲ್ಲದ ಮಂತ್ರಾದಿಭಾಗಗಳಿಗೆ ಪ್ರಾಮಾಣ್ಯ ಒಪ್ಪಬಾರದು ಎಂದು ಹೇಳುತ್ತಿದೆ. ಈ ಅರ್ಥವು ಮೀಮಾಂಸಕರ ಮತಪ್ರಕಾರ ತಿಳಿಯಬೇಕು. ನಮ್ಮ ಸಿದ್ಧಾಂತದಂತೆ ಈ ಸೂತ್ರಕ್ಕೆ ಈ ಅರ್ಥವಿಲ್ಲ. ಮೀಮಾಂಸಕರ ವ್ಯಾಖ್ಯಾನವನ್ನು ಅನುಸರಿಸಿಯೇ ಮೀಮಾಂಸಕರಿಗೆ ಹೇಳಲು ಈ ವಾಕ್ಯಸಂದರ್ಭ ಹೊರಟಿದೆ.

ಮೀಮಾಂಸಕರು ಕಾರ್ಯವನ್ನೇ ಅಪೂರ್ವವತ್ವವೆಂದು ಹೇಳುತ್ತಾರೆ. ಕ್ರಿಯೆ ಬೇರೆ, ಕಾರ್ಯ ಬೇರೆ. ಕ್ರಿಯೆಯಿಂದ ಹುಟ್ಟಿದ ಅಪೂರ್ವವು ಕಾರ್ಯವೆಂದು ಕರೆಸಿಕೊಳ್ಳುತ್ತದೆ. ಲಿಜ್‌ಲೋಟ್ ತವ್ಯಪ್ರತ್ಯಯಗಳಿಂದ ಕ್ರಿಯಾಜನ್ಯವಾದ ಕಾರ್ಯರೂಪವಾದ ಅಪೂರ್ವವು ಪ್ರತಿಪಾದ್ಯವಾಗುತ್ತದೆ ಹೊರತು, ಕ್ರಿಯೆಯು ಪ್ರತಿಪಾದ್ಯವಾಗುವುದಿಲ್ಲವೆಂಬುದು ಮೀಮಾಂಸಕರ ಅಭಿಪ್ರಾಯ. ಅದನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆಂದು ತಿಳಿಯಬೇಕು.

ಸ್ಥಾಯಿಯಾದ ಅಪೂರ್ವವತ್ವವನ್ನು ಒಪ್ಪುವುದು ಅನಿವಾರ್ಯವೇ ?

**तत्वप्रदीपः – ननु ''स्वर्गकामो यजेत'' इत्यादिवाक्यप्रामाण्यार्थमेव क्रियातिरिक्तं किञ्चित्स्थायि कार्यं विध्यर्थत्वेनाभ्युपगन्तव्यम् । क्रियायाः क्षणविनाशित्वेन देहान्तरोपभोग्यस्वर्गादिफलदानायोगादिति ।**

ಮೀಮಾಂಸಕರು - 'ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳ ಪ್ರಾಮಾಣ್ಯಕ್ಕೋಸ್ಕರವೇ ಕ್ರಿಯೆಗಿಂತಲೂ ಅತಿರಿಕ್ತವಾದ ಸ್ಥಾಯಿಯಾದ ಕಾರ್ಯವನ್ನೇ ವಿಧಿಪ್ರತ್ಯಯಗಳ ಅರ್ಥವೆಂದು ಅಂಗೀಕಾರ ಮಾಡಬೇಕು. ಕ್ರಿಯೆಯು ಕ್ಷಣಿಕವಾದ್ದರಿಂದ ದೇಹಾಂತರದಲ್ಲಿ ಉಪಭೋಗ್ಯವಾದ ಸ್ವರ್ಗಾದಿಫಲವನ್ನು ಕೊಡಲು ಅಸಮರ್ಥವಾಗಿದೆ.

ವಿವರಣೆ - 'ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವು ಸ್ವರ್ಗಕಾಮನೆಗೋಸ್ಕರ ಜ್ಯೋತಿಷ್ಟೋಮಯಾಗವನ್ನು ವಿಧಾನ ಮಾಡುತ್ತಿದೆ. 'ಯಜೇತ' ಎಂಬಲ್ಲಿರುವ ವಿಧಿಪ್ರಯತ್ನವು ಕೇವಲ ಕ್ರಿಯೆಯನ್ನೇ ಪ್ರತಿಪಾದನೆ ಮಾಡುವುದಾದರೆ ಕ್ರಿಯೆಯು ಕ್ಷಣಿಕವಾದ್ದರಿಂದ ದೇಹಾಂತರದಲ್ಲಿ ಉಪಭೋಗಿಸುವ ಸ್ವರ್ಗಾದಿ ಫಲಗಳಿಗೆ ಕಾರಣವಾಗಲು ಸಾಧ್ಯವಿಲ್ಲ. ಈಗಿರುವ ಕ್ರಿಯೆಯು ದೇಹಾಂತರದಲ್ಲಿರುವ ಉಪಭೋಗಕ್ಕೆ ಸಾಧನವಾಗಲು ಹೇಗೆ ಸಮರ್ಥವಾಗುತ್ತದೆ ? ಆದ್ದರಿಂದ ಯಾಗಕ್ರಿಯೆಯಿಂದ ಸ್ಥಾಯಿಯಾದ ಅಪೂರ್ವತಾರೂಪವಾದ ಕಾರ್ಯವನ್ನು ಒಪ್ಪಲೇ ಬೇಕು. ಇದು ದೇಹಾಂತರದ ಉಪಭೋಗಕ್ಕೆ ಕಾರಣವಾಗುತ್ತದೆ.

ಅಪೂರ್ವತ್ವವಾಚಕವಾದ ಯಾವುದೇ ಪದಗಳಿಲ್ಲ

**तत्वप्रदीपः – मैवम् । क्रियातिरिक्ते व्युत्पत्त्यसम्भवात् । न तावल्लोकतस्तत्र व्युत्पत्तिः । अलौकिकत्वात्तस्य । नापि जिह्वादाविव प्रसिद्धपदसमभिव्याहारात् । ज्योतिष्टोमादिवाक्येषु तद्वाचकपदाभावात् । क्रियामात्रवाचिनो हि धातवः । लिङादयस्तु कर्तव्यतामात्रनिष्ठाः । अतो नात्र कार्याभिधायि पदं पश्यामः ।**

ತತ್ವವಾದಿಗಳು - ಮೀಮಾಂಸಕರ ಈ ಅಭಿಪ್ರಾಯ ತಪ್ಪು. ಕ್ರಿಯೆಗಿಂತ ಅತಿರಿಕ್ತವಾದ ಕಾರ್ಯತ್ವದಲ್ಲಿ ವಿಧಿಪ್ರತ್ಯಯಕ್ಕೆ ವ್ಯುತ್ಪತ್ತಿಯೇ ಕೂಡುವುದಿಲ್ಲ. ಲೋಕರೂಢಿಯಿಂದಲೂ ಈ ವ್ಯುತ್ಪತ್ತಿ ಅಸಾಧುವಾಗಿದೆ. ಏಕೆಂದರೆ ಅಪೂರ್ವವೆಂಬ ಶಬ್ದವೇ ಇದು ಅಲೌಕಿಕವೆಂದು ತಿಳಿಸುತ್ತಿದೆ.

**सूत्रविरोधश्च तत्पक्ष एव भवति । क्रियातिरिक्तस्य कस्यचित्कार्यस्य लिङाद्यर्थत्वाभ्युमगमात्।**

ತತ್ವವಾದಿಗಳು - 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್' 'ವೇದವು ಕ್ರಿಯೆಯಲ್ಲಿಯೇ ತಾತ್ಪರ್ಯವನ್ನು ಹೊಂದಿದೆ. ಕ್ರಿಯಾವಾಚಿಯಾಗದ ಅರ್ಥವಾದ ಮಂತ್ರ ಇತ್ಯಾದಿ ವಾಕ್ಯಗಳಿಗೆ ಮಂತ್ರಗಳು ವ್ಯರ್ಥ' ಎಂಬ ಸೂತ್ರದಿಂದ ಮೀಮಾಂಸಕರಿಗೆ ವಿರೋಧವು ಬರುತ್ತದೆ. ಏಕೆಂದರೆ ಕ್ರಿಯೆಗಿಂತ ಅತಿರಿಕ್ತವಾದ ಕಾರ್ಯವು ಲಿಙಾದ್ಯರ್ಥವೆಂದು ಮೀಮಾಂಸಕರು ಒಪ್ಪಿರುತ್ತಾರೆ.

ವಿವರಣೆ - 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್' ಎಂಬ ಜೈಮಿನಿಸೂತ್ರವು ಕ್ರಿಯಾವಾಚಕವಿದ್ದರೆ ಮಾತ್ರ ಪ್ರಾಮಾಣ್ಯ ಒಪ್ಪಬೇಕು. ಕ್ರಿಯಾವಾಚಕವಿಲ್ಲದ ಮಂತ್ರಾದಿಭಾಗಗಳಿಗೆ ಪ್ರಾಮಾಣ್ಯ ಒಪ್ಪಬಾರದು ಎಂದು ಹೇಳುತ್ತಿದೆ. ಈ ಅರ್ಥವು ಮೀಮಾಂಸಕರ ಮತಪ್ರಕಾರ ತಿಳಿಯಬೇಕು. ನಮ್ಮ ಸಿದ್ಧಾಂತದಂತೆ ಈ ಸೂತ್ರಕ್ಕೆ ಈ ಅರ್ಥವಿಲ್ಲ. ಮೀಮಾಂಸಕರ ವ್ಯಾಖ್ಯಾನವನ್ನು ಅನುಸರಿಸಿಯೇ ಮೀಮಾಂಸಕರಿಗೆ ಹೇಳಲು ಈ ವಾಕ್ಯಸಂದರ್ಭ ಹೊರಟಿದೆ.

ಮೀಮಾಂಸಕರು ಕಾರ್ಯವನ್ನೇ ಅಪೂರ್ವವತ್ವವೆಂದು ಹೇಳುತ್ತಾರೆ. ಕ್ರಿಯೆ ಬೇರೆ, ಕಾರ್ಯ ಬೇರೆ. ಕ್ರಿಯೆಯಿಂದ ಹುಟ್ಟಿದ ಅಪೂರ್ವವು ಕಾರ್ಯವೆಂದು ಕರೆಸಿಕೊಳ್ಳುತ್ತದೆ. ಲಿಙ್‌ಲೋಟ್ ತವ್ಯಪ್ರತ್ಯಯಗಳಿಂದ ಕ್ರಿಯಾಜನ್ಯವಾದ ಕಾರ್ಯರೂಪವಾದ ಅಪೂರ್ವವು ಪ್ರತಿಪಾದ್ಯವಾಗುತ್ತದೆ ಹೊರತು, ಕ್ರಿಯೆಯು ಪ್ರತಿಪಾದ್ಯವಾಗುವುದಿಲ್ಲವೆಂಬುದು ಮೀಮಾಂಸಕರ ಅಭಿಪ್ರಾಯ. ಅದನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆಂದು ತಿಳಿಯಬೇಕು.

ಸ್ಥಾಯಿಯಾದ ಅಪೂರ್ವವತ್ವವನ್ನು ಒಪ್ಪುವುದು ಅನಿವಾರ್ಯವೇ ?

**तत्वप्रदीपः – ननु ''स्वर्गकामो यजेत'' इत्यादिवाक्यप्रामाण्यार्थमेव क्रियातिरिक्तं किञ्चित्स्थायि कार्यं विध्यर्थत्वेनाभ्युपगन्तव्यम् । क्रियायाः क्षणविनाशित्वेन देहान्तरोपभोग्यस्वर्गादिफलदानायोगादिति ।**

ಮೀಮಾಂಸಕರು - 'ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳ ಪ್ರಾಮಾಣ್ಯಕ್ಕೋಸ್ಕರವೇ ಕ್ರಿಯೆಗಿಂತಲೂ ಅತಿರಿಕ್ತವಾದ ಸ್ಥಾಯಿಯಾದ ಕಾರ್ಯವನ್ನೇ ವಿಧಿಪ್ರತ್ಯಯಗಳ ಅರ್ಥವೆಂದು ಅಂಗೀಕಾರ ಮಾಡಬೇಕು. ಕ್ರಿಯೆಯು ಕ್ಷಣಿಕವಾದ್ದರಿಂದ ದೇಹಾಂತರದಲ್ಲಿ ಉಪಭೋಗ್ಯವಾದ ಸ್ವರ್ಗಾದಿಫಲವನ್ನು ಕೊಡಲು ಅಸಮರ್ಥವಾಗಿದೆ.

ವಿವರಣೆ - 'ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವು ಸ್ವರ್ಗಕಾಮನಿಗೋಸ್ಕರ ಜ್ಯೋತಿಷ್ಟೋಮಯಾಗವನ್ನು ವಿಧಾನ ಮಾಡುತ್ತಿದೆ. 'ಯಜೇತ' ಎಂಬಲ್ಲಿರುವ ವಿಧಿಪ್ರಯತ್ನವು ಕೇವಲ ಕ್ರಿಯೆಯನ್ನೇ ಪ್ರತಿಪಾದನೆ ಮಾಡುವುದಾದರೆ ಕ್ರಿಯೆಯು ಕ್ಷಣಿಕವಾದ್ದರಿಂದ ದೇಹಾಂತರದಲ್ಲಿ ಉಪಭೋಗಿಸುವ ಸ್ವರ್ಗಾದಿ ಫಲಗಳಿಗೆ ಕಾರಣವಾಗಲು ಸಾಧ್ಯವಿಲ್ಲ. ಈಗಿರುವ ಕ್ರಿಯೆಯು ದೇಹಾಂತರದಲ್ಲಿರುವ ಉಪಭೋಗಕ್ಕೆ ಸಾಧನವಾಗಲು ಹೇಗೆ ಸಮರ್ಥವಾಗುತ್ತದೆ ? ಆದ್ದರಿಂದ ಯಾಗಕ್ರಿಯೆಯಿಂದ ಸ್ಥಾಯಿಯಾದ ಅಪೂರ್ವತಾರೂಪವಾದ ಕಾರ್ಯವನ್ನು ಒಪ್ಪಲೇ ಬೇಕು. ಇದು ದೇಹಾಂತರದ ಉಪಭೋಗಕ್ಕೆ ಕಾರಣವಾಗುತ್ತದೆ.

### ಅಪೂರ್ವತ್ವವಾಚಕವಾದ ಯಾವುದೇ ಪದಗಳಿಲ್ಲ

**तत्वप्रदीपः – मैवम् । क्रियातिरिक्ते व्युत्पत्त्यसम्भवात् । न तावल्लोकतस्तत्र व्युत्पत्तिः । अलौकिकत्वात्तस्य । नापि जिह्वादाविव प्रसिद्धपदसमभिव्याहारात् । ज्योतिष्टोमादिवाक्येषु तद्वाचकपदाभावात् । क्रियामात्रवाचिनो हि धातवः । लिङादयस्तु कर्तव्यतामात्रनिष्ठाः । अतो नात्र कार्याभिधायि पदं पश्यामः ।**

ತತ್ವವಾದಿಗಳು - ಮೀಮಾಂಸಕರ ಈ ಅಭಿಪ್ರಾಯ ತಪ್ಪು. ಕ್ರಿಯೆಗಿಂತ ಅತಿರಿಕ್ತವಾದ ಕಾರ್ಯತ್ವದಲ್ಲಿ ವಿಧಿಪ್ರತ್ಯಯಕ್ಕೆ ವ್ಯುತ್ಪತ್ತಿಯೇ ಕೂಡುವುದಿಲ್ಲ. ಲೋಕರೂಢಿಯಿಂದಲೂ ಈ ವ್ಯುತ್ಪತ್ತಿ ಅಸಾಧುವಾಗಿದೆ. ಏಕೆಂದರೆ ಅಪೂರ್ವವೆಂಬ ಶಬ್ದವೇ ಇದು ಅಲೌಕಿಕವೆಂದು ತಿಳಿಸುತ್ತಿದೆ.

ಮೀಮಾಂಸಕರು - ಜಿಹ್ವಾ ಶಬ್ದಕ್ಕೆ ದಹತಿ ಇತ್ಯಾದಿ ಶಬ್ದಗಳ ಸಮಭಿವ್ಯಹಾರವಿದ್ದಾಗ ಅಗ್ನಿಯ ಜ್ವಾಲೆ ಎಂಬರ್ಥವು ತಿಳಿಯುತ್ತದೆ. ಆಸ್ವಾದಯತಿ ಇತ್ಯಾದಿ ಶಬ್ದಗಳ ಸಮಭಿವ್ಯಹಾರವಿದ್ದಾಗ ನಾಲಿಗೆ ಎಂಬ ಅರ್ಥವು ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲೂ ಪ್ರಸಿದ್ಧಪದ ಸಮಭಿವ್ಯಾಹಾರದಿಂದ ಅಲೌಕಿಕವಾದ ಅಪೂರ್ವತ್ವದಲ್ಲಿ ವಿಧಿಪ್ರತ್ಯಯಕ್ಕೆ ವ್ಯುತ್ಪತ್ತಿಯನ್ನು ಅಂಗೀಕರಿಸುತ್ತೇವೆ.

ತತ್ವವಾದಿಗಳು - 'ಜ್ಯೋತಿಷ್ಟೋಮಾದಿ' ವಾಕ್ಯಗಳಲ್ಲಿ ಅಂಥ ಪ್ರಸಿದ್ಧ ಪದ ಸಮಭಿವ್ಯಾಹಾರವೇ ಕಾಣಿಸುತ್ತಿಲ್ಲ. ಕಾರ್ಯತ್ವವಾಚಕವಾದ ಯಾವುದೇ ಪದಗಳಿಲ್ಲದ ಕಾರಣ ಪ್ರಸಿದ್ಧಪದಸಮಭಿವ್ಯಾಹಾರದಿಂದಲೂ ಕೂಡ ವಿಧಿಪ್ರತ್ಯಯಗಳಿಗೆ ಅಪೌರ್ವತ್ವವನ್ನು ಅರ್ಥವನ್ನಾಗಿ ಜಿಹ್ವಾದಿಗಳಂತೆ ಹೇಳಲು ಬರುವುದಿಲ್ಲ.

ಧಾತುಗಳು ಕ್ರಿಯೆಯನ್ನಷ್ಟೇ ಪ್ರತಿಪಾದನೆ ಮಾಡುತ್ತವೆ. ಲಿಙಾದಿಗಳು ಕರ್ತವ್ಯತ್ವವನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ. ಇವೆರಡಕ್ಕಿಂತ ಅತಿರಿಕ್ತವಾಗಿ ಕಾರ್ಯವನ್ನು ಪ್ರತಿಪಾದನೆ ಮಾಡುವ ಯಾವುದೇ ಪದವನ್ನು ಜ್ಯೋತಿಷ್ಟೋಮಾದಿ ವಾಕ್ಯಗಳಲ್ಲಿ ಕಾಣಲು ನಮಗೆ ಸಾಧ್ಯವಿಲ್ಲ.

### ವೇದೈಕಗಮ್ಯವಾದ ಅಪೂರ್ವತ್ವವು ತರ್ಕಗಮ್ಯವಲ್ಲ

**तत्वप्रदीपः – प्रामाण्यानुपपत्तितर्कावगम्यं कार्यं लिङाद्यर्थं ब्रूम इति चेत्तर्हि क्रियाकर्तव्यतायां प्रमाणाभावात् क्रियालोपः स्यात् । तर्कगम्यत्वे चापूर्वत्वं प्रत्यादिष्टं स्यात् । तथाच न वेदैकगम्यो नियोगः ।**

ಮೀಮಾಂಸಕರು - 'ಯಜೇತ' ಇತ್ಯಾದಿ ಲಿಙಾದಿ ವಿಧಿವಾಕ್ಯಗಳಿಂದ ಕಾರ್ಯತ್ವವು ಬೋಧ್ಯವಾಗುತ್ತದೆಂದು ಒಪ್ಪದಿದ್ದರೆ ಸ್ವರ್ಗಕಾಮೋ ಯಜೇತ' ಇತ್ಯಾದಿ ವಾಕ್ಯಗಳಿಗೆ ಪ್ರಾಮಾಣ್ಯವೇ ಅನುಪಪನ್ನವಾಗುತ್ತದೆ. ಇಲ್ಲಿ ಪ್ರಾಮಾಣ್ಯಾನ್ಯಥಾನುಪಪತ್ತಿ ಎಂಬ ತರ್ಕದಿಂದ ಕಾರ್ಯತ್ವರೂಪವಾದ ಅಪೂರ್ವತಾವು ಲಿಙಾದ್ಯರ್ಥವೆಂದು ಹೇಳುತ್ತೇವೆ.

ತತ್ವವಾದಿಗಳು - ಹಾಗಾದಲ್ಲಿ ಲಿಙಾದಿ ಪ್ರತ್ಯಯಗಳು ಕಾರ್ಯತ್ವವನ್ನೇ ಬೋಧಿಸುತ್ತವೆ ಎಂದು ಹೇಳಿದಂತಾಯಿತು. ಕ್ರಿಯಾಕರ್ತವ್ಯತ್ವದಲ್ಲಿ ಪ್ರಮಾಣವೇ ಇಲ್ಲವೆಂದಾಯಿತು. ಆಗ ಕ್ರಿಯೆಯೇ ಲೋಪವಾಗುವ ಪರಿಸ್ಥಿತಿ ಬರುತ್ತದೆ.

ಮತ್ತು ಅಪೂರ್ವತ್ವವು 'ಪ್ರಾಮಾಣ್ಯಾನ್ಯಥಾನುಪಪತ್ತಿ' ಎಂಬ ತರ್ಕದಿಂದ ಗಮ್ಯವೆಂದು ಹೇಳುತ್ತಿದ್ದೀರಿ. ಹೀಗೆ ಹೇಳಿದರೆ ಅಪೂರ್ವತ್ವವನ್ನೇ ಬಿಟ್ಟಂತಾಗುತ್ತದೆ. ಏಕೆಂದರೆ ಅಪೂರ್ವತ್ವವು ವೇದೈಕಗಮ್ಯವೆಂಬುದು ಮೀಮಾಂಸಕರ ಮತ. ಈಗ ವೇದಕ್ಕಿಂತಲೂ ಅತಿರಿಕ್ತವಾದ ತರ್ಕವೆಂಬ ಪ್ರಮಾಣದಿಂದ ಗಮ್ಯವೆಂದು ಮೀಮಾಂಸಕರಾದ ನೀವು ಹೇಳುತ್ತಿರುವುದರಿಂದ ಅಪೂರ್ವತ್ವವನ್ನೇ ಬಿಟ್ಟಂತಾಗುತ್ತದೆ. (ಪ್ರತ್ಯಾದಿಷ್ಟಂ ಸ್ಯಾತ್ = ಕೈಬಿಟ್ಟಂತಾಗುತ್ತದೆ.)

### ತರ್ಕವು ಸ್ಮೃತಿರೂಪವಲ್ಲ

**तत्वप्रदीपः – नच वाच्यं तर्कस्य स्मृतिरूपत्वान्न प्रमाणान्तरतापत्तिरिति। अनुभूतविषयत्वादिपरोक्षरूपत्वाच्च स्मृतेः । तर्कस्य लैङ्गिकत्वात् । सापेक्षज्ञानत्वं स्मृतिलक्षणं लक्षणविदो वदन्ति । अतो भाविभूतप्रमाणान्तर-सापेक्षत्वान्न तर्कस्मृत्योर्भेद इति चेन्न । पूर्वानुभूतसंस्कारमात्रजं ज्ञानं स्मृतिरिति स्वाभ्युपगमविरोधात् । नच तर्कस्यानुमानादधिकं प्रमाणान्तरसापेक्षत्वं लक्ष्यते ।**

ಮೀಮಾಂಸಕರು - ತರ್ಕವು ಪ್ರತ್ಯೇಕ ಪ್ರಮಾಣವೇ ಅಲ್ಲ. ಅದು ಸ್ಮೃತಿರೂಪವಾಗಿದೆ. ಆದ್ದರಿಂದ ಅಪೂರ್ವತ್ವಕ್ಕೆ ವೇದೈಕಗಮ್ಯತ್ವವು ಇದ್ದೇ ಇರುತ್ತದೆ.

ತತ್ವವಾದಿಗಳು - ಇದು ಸರಿಯಲ್ಲ. ಸ್ಮೃತಿಯು ಅನುಭೂತವಿಷಯಕವಾಗಿದೆ ಹಾಗೂ ಅಪರೋಕ್ಷರೂಪವಾಗಿದೆ. ತರ್ಕವು ಲೈಂಗಿಕವಾಗಿದೆ. ಆದ್ದರಿಂದ ಸ್ಮೃತಿಯೇ ಬೇರೆ ಪ್ರಮಾಣ, ತರ್ಕವೇ ಬೇರೆ ಪ್ರಮಾಣ. ಎರಡನ್ನು ಒಂದೇ ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ಅಪೂರ್ವತಾವು ತರ್ಕಗಮ್ಯವೆಂದು ಹೇಳಿದರೆ ವೇದೈಕಗಮ್ಯತ್ವಕ್ಕೆ ಚ್ಯುತಿ ಬಂದೇ ಬರುತ್ತದೆ.

ಮೀಮಾಂಸಕರು - ಲಕ್ಷಣಜ್ಞಾನಿಗಳು ಸಾಪೇಕ್ಷಜ್ಞಾನತ್ವವನ್ನು ಸ್ಮೃತಿಲಕ್ಷಣವೆನ್ನುತ್ತಾರೆ. ತರ್ಕವೂ ಕೂಡ ಸ್ವತಃ ಪ್ರಮಾಣವಲ್ಲದ ಕಾರಣ ಹಿಂದಿನ ಅಥವಾ ಮುಂದಿನ ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸಿಯೇ ಜ್ಞಾನಜನಕವಾಗುತ್ತದೆ. ಆದ್ದರಿಂದ ತರ್ಕದ ಲಕ್ಷಣವು ಸಾಪೇಕ್ಷಜ್ಞಾನತ್ವ ಇಲ್ಲಿ ಹೇಳಿದಂತಾಯಿತು. ಹೀಗೆ ಸ್ಮೃತಿ ಹಾಗೂ ತರ್ಕಗಳಿಗೆ ವೈಲಕ್ಷಣ್ಯವಿಲ್ಲವೆಂದು ಹೇಳುತ್ತೇವೆ.

ತತ್ವವಾದಿಗಳು - ಇದೂ ಕೂಡ ತಪ್ಪು. 'ಪೂರ್ವಾನುಭೂತಸಂಸ್ಕಾರಮಾತ್ರಜಂ ಜ್ಞಾನಂ ಸ್ಮೃತಿಃ' ಹಿಂದಿನ ಅನುಭವದಿಂದ ಹುಟ್ಟಿದ ಸಂಸ್ಕಾರದಿಂದಷ್ಟೇ ಹುಟ್ಟುವ ಜ್ಞಾನವನ್ನು ಸ್ಮೃತಿ ಎನ್ನಬೇಕು ಎಂಬುದಾಗಿ ಮೀಮಾಂಸಕರಾದ ನೀವೇ ಒಪ್ಪಿರುತ್ತೀರಿ. ಪ್ರಕೃತ ಸಾಪೇಕ್ಷಜ್ಞಾನತ್ವವನ್ನು ಸ್ಮೃತಿಲಕ್ಷಣವೆಂದು ಹೇಳಿದರೆ ಸ್ವಾಭ್ಯುಪಗಮವಿರೋಧವು ನಿಮಗೆ ಬರುತ್ತದೆ. ಅನುಮಾನವು ತನಗೆ ಉಪಜೀವ್ಯವಾದ ಪ್ರತ್ಯಕ್ಷ ಹಾಗೂ ಆಗಮವೆಂಬ ಪ್ರಮಾಣಾಂತರದ ಅಪೇಕ್ಷೆಯುಳ್ಳದ್ದಾಗಿದೆ. ತರ್ಕವೂ ಕೂಡ ಅದೇ ಪ್ರತ್ಯಕ್ಷ ಹಾಗೂ ಆಗಮಗಳ ಅಪೇಕ್ಷೆಯುಳ್ಳದ್ದಾಗಿದೆ. ಆದ್ದರಿಂದ ಅನುಮಾನಕ್ಕಿಂತ ಹೆಚ್ಚಿನ ಪ್ರಮಾಣದ ಅಪೇಕ್ಷೆ ತರ್ಕದಲ್ಲಿ ಇರುವುದಿಲ್ಲವೆಂದೇ ತರ್ಕದ ಲಕ್ಷಣವನ್ನು ಹೇಳುತ್ತಾರೆ.

### ತರ್ಕಕ್ಕೆ ಪ್ರಮಾಣಾನುಗ್ರಹಕತ್ವವಿದೆಯೇ ?

**तत्वप्रदीपः – अथ प्रमाणानुग्राहकत्वात्तर्कस्य स्वविषयभाविप्रमाणान्तर-सापेक्षत्वमस्तितरामिति, तदयुक्तम् । व्याप्तिमतस्तस्य स्वयमनुमानात्मकत्वेन प्रमाणानुग्राहकत्वमात्राभावात् । व्याप्तिविरहिणस्तु तदाभासत्वेनाननुग्राहकत्वात् ।**

ಮೀಮಾಂಸಕರು - ತರ್ಕವು ಪ್ರಮಾಣಕ್ಕೆ ಅನುಗ್ರಾಹಕವಾಗಿದೆ. ಆದ್ದರಿಂದ ಅನುಗ್ರಾಹ್ಯವಾದ ತನಗೆ ವಿಷಯವಾದ ಮತ್ತೊಂದು ಪ್ರಮಾಣದ ಅಪೇಕ್ಷೆಯು ಇರುತ್ತದಲ್ಲವೇ ? ಆದ್ದರಿಂದ ಅನುಮಾನಕ್ಕಿಂತ ಹೆಚ್ಚಿನ ಪ್ರಮಾಣದ ಅಪೇಕ್ಷೆಯಿಲ್ಲವೆಂದು ಹೇಗೆ ಹೇಳುವಿರಿ ?

ತತ್ವವಾದಿಗಳು - ಇದು ಅಯುಕ್ತ. ತರ್ಕವು ಎರಡುವಿಧ - ೧. ವ್ಯಾಪ್ತಿಯುಳ್ಳದ್ದು, ೨. ವ್ಯಾಪ್ತಿಯಿಲ್ಲದ್ದು. ಇವೆರಡರಲ್ಲಿ ವ್ಯಾಪ್ತಿಯುಳ್ಳ ತರ್ಕವು ಸ್ವಯಂ ಅನುಮಾನಸ್ವರೂಪವೇ ಆಗಿದೆ. ಆದ್ದರಿಂದ ಪ್ರಮಾಣಾನುಗ್ರಾಹಕತ್ವವಷ್ಟೇ ಇದರಲ್ಲಿ ಇರುವುದಿಲ್ಲ. ಸ್ವತಃ ತಾನೂ ಕೂಡ ಪ್ರಮಾಣವೇ ಆಗಿದೆ. ವ್ಯಾಪ್ತಿರಹಿತವಾದ ತರ್ಕವಾದರೂ ಕೂಡ ತರ್ಕಾಭಾಸವೇ ಹೊರತು, ತರ್ಕರೂಪವಲ್ಲ. ಆದ್ದರಿಂದ ಪ್ರಮಾಣವೇ ಅಲ್ಲದ ಕಾರಣ ಪ್ರಮಾಣಾನುಗ್ರಾಹಕವೂ ಕೂಡ ಆಗಲು ಸಾಧ್ಯವಿಲ್ಲ.

ಅನುಮಾನವು ನಿಯತಾವಯವ ಉಳ್ಳದ್ದಲ್ಲ

**तत्वप्रदीपः – नच नियतावयवमेवानुमानं प्रमाणमिति नियमः । निजसमयनियमितावयवरहितेनापि तेन परपरिजल्पितेन साध्यार्थावगमात् । नियमसाधकप्रमाणाभावाच्च । नचानुमानात् तत् सिद्धिः । तत् साधकस्यानुमानस्य नियतावयवत्वाङ्गीकारेऽनवस्थाप्रसक्तेः । तर्कमात्रत्वे तत्प्रामाण्यं प्रथमत एव समाश्रयणीयम् । अतः किमनेनाजागलस्तनायमानेना-वयवनियमकल्पनेन ।**

ಮೀಮಾಂಸಕರು - ಅನುಮಾನವು ಮೂರೇ ಅವಯವಗಳಿಂದ ಕೂಡಿರಬೇಕೆಂಬ ನಿಯಮವನ್ನು ಹೊಂದಿದೆ. ಆದರೆ ತರ್ಕಕ್ಕೆ ಇಷ್ಟೇ ಅವಯವಗಳಿರಬೇಕೆಂಬ ನಿಯಮ-ವಿರುವುದಿಲ್ಲ. ಆದ್ದರಿಂದ ತರ್ಕವನ್ನು ಅನುಮಾನಸ್ವರೂಪವೆಂದು ಹೇಗೆ ಹೇಳುವಿರಿ ?

ತತ್ವವಾದಿಗಳು - ಇದು ತಪ್ಪು. ಮೀಮಾಂಸಕರಾದ ನೀವು ಅನುಮಾನಕ್ಕೆ ಮೂರು ಅವಯವಗಳು ನಿಯತವೆನ್ನುವಿರಿ. ತಾರ್ಕಿಕರು ಐದು ಅವಯವಗಳು ನಿಯತವೆನ್ನುವರು. ಐದು ಅವಯವಗಳಿದ್ದರೆ ಅಂಥ ಅನುಮಾನವು ಸಾಧ್ಯಸಾಧನೆಗೆ ಸಮರ್ಥವಾಗುತ್ತದೆಂದು ತಾರ್ಕಿಕರು ಒಪ್ಪಿದ್ದರೂ ಕೂಡ ಅಂಥ ತಾರ್ಕಿಕರನ್ನು ಕುರಿತು ಮೀಮಾಂಸಕರಾದ ನೀವು ಮೂರೇ ಅವಯವಗಳುಳ್ಳ ಅನುಮಾನಗಳನ್ನು ಪ್ರಯೋಗ ಮಾಡಿದಾಗ ತಾರ್ಕಿಕರಿಗೆ ಸಾಧ್ಯದ ಅರ್ಥಾವಗಮವು ಆಗಿಯೇ ಆಗುತ್ತದೆ. ಆದ್ದರಿಂದ ತಮ್ಮ ಸಿದ್ಧಾಂತದಲ್ಲಿ ನಿಯಮೇನ ಒಪ್ಪಿದ ಐದೇ ಅವಯವಗಳು ಇಲ್ಲದಿದ್ದರೂ ಅಕೂಡ ತಾರ್ಕಿಕರಿಗೆ ನೀವು ಪ್ರಯೋಗಿಸುವ ಅನುಮಾನದಿಂದ ಸಾಧ್ಯದ ಅರ್ಥಾವಗಮವು ಆಗುತ್ತದೆ. ಆದ್ದರಿಂದ ಅನುಮಾನವು ಇಷ್ಟೇ ಅವಯವಗಳಿಂದ ಕೂಡಿರಬೇಕೆಂಬ ನಿಯಮವು ತಪ್ಪು. ಹೇಗೆ ಅನುಮಾನವು ನಿಯತ ಅವಯವಗಳುಳ್ಳದ್ದು ಆಗುವುದಿಲ್ಲವೋ, ಅದರಂತೆ ತರ್ಕವೂ ಕೂಡ ನಿಯತ ಅವಯವುಗಳುಳ್ಳದ್ದು ಆಗುವುದಿಲ್ಲ. ಆದ್ದರಿಂದ ತರ್ಕ ಹಾಗೂ ಅನುಮಾನ ಎರಡೂ ಒಂದೇ ಎಂದು ಹೇಳಬಹುದು.

ಮತ್ತೊಂದು ದೋಷ - ಅನುಮಾನವು ನಿಯತವಾದ ಅವಯವವುಳ್ಳದ್ದಾಗಿರಬೇಕೆಂಬ ವಿಷಯದಲ್ಲಿ ಸಾಧಕಪ್ರಮಾಣವೂ ಕೂಡ ಇರುವುದಿಲ್ಲ.

ಮೀಮಾಂಸಕರು - ಅನುಮಾನವೇ ಸಾಧಕಪ್ರಮಾಣವಾಗಿದೆ. ಅನುಮಾನದಿಂದ ನಾವು ಅನುಮಾನವು ನಿಯತವಾದ ಅವಯವವುಳ್ಳದ್ದೆಂದು ಸಾಧಿಸುತ್ತೇವೆ.

ತತ್ವವಾದಿಗಳು - ನಿಯತಾವಯವವುಳ್ಳದ್ದೆಂದು ಸಾಧಿಸುವ ಅನುಮಾನವೂ ಕೂಡ ನಿಯತ ಅವಯವವುಳ್ಳದ್ದಾಗಿರಬೇಕೆಂದು ಒಪ್ಪಿದರೆ ಅನವಸ್ಥಾದೋಷ ಬರುತ್ತದೆ. ಏಕೆಂದರೆ ಈ ಅನುಮಾನವೂ ಕೂಡ ಏಕೆ ನಿಯತ ಅವಯವವುಳ್ಳದ್ದಾಗಿರಬೇಕು ? ಎಂಬ ಪ್ರಶ್ನೆಗೆ ನೀವು ಮತ್ತೊಂದು ಅನುಮಾನಪ್ರಮಾಣವನ್ನೇ ನೀವು ಹೇಳಬೇಕು. ಆಗ ಆ ಅನುಮಾನವೂ ಕೂಡ ಮತ್ತೊಂದು ಅನುಮಾನವನ್ನು ಅಪೇಕ್ಷೆ ಪಡುವುದರಿಂದ ಅನವಸ್ಥಾದೋಷವು ಮೀಮಾಂಸಕರಿಗೆ ತಪ್ಪಿದ್ದಲ್ಲ.

ಮೀಮಾಂಸಕರು - ನಿಯತಾವಯವವುಳ್ಳದ್ದಾಗಿರಬೇಕೆಂದು ಸಾಧಿಸುವುದು ಅನುಮಾನವಲ್ಲ. ತರ್ಕವೆಂದು ಹೇಳುತ್ತೇವೆ. ಆದ್ದರಿಂದ ಅನವಸ್ಥಾದೋಷವು ಬರುವುದಿಲ್ಲ.

ತತ್ವವಾದಿಗಳು - ಹಾಗಾದರೆ ಅಂತಿಮವಾಗಿ ತರ್ಕವನ್ನು ನೀವು ಅನುಮಾನಕ್ಕಿಂತ ಪ್ರತ್ಯೇಕ ಪ್ರಮಾಣವೆಂದು ಒಪ್ಪಲೇ ಬೇಕಾಯಿತು. ಇದನ್ನು ಮೊದಲೇ ಒಪ್ಪಿದ್ದರೆ ಜಾಣರಾಗುತ್ತಿದ್ದಿರಿ. ಆದ್ದರಿಂದ ಅಜಾಗಲಸ್ತನದಂತೆ ಅವಯವನಿಯಮಕಲ್ಪನವು ವ್ಯರ್ಥವಾಗಿದೆ.

**ದೂಷಣಾನುಮಾನದಂತೆ ಸಾಧನಾನುಮಾನದಲ್ಲಿಯೂ ಅವಯವಗಳ ನಿಯಮವಿಲ್ಲ**

**तत्वप्रदीपः – नन्वसति नियमे प्रयोजकक्लृप्त्यभावान्न्यूनाधिकता-विवेकानुपपत्तिरिति । मैवम् । दूषणोक्तिवदुपपत्तेः । नहि परप्रयुक्ते साधने दूषणं सनियममुपन्यस्यते। नचानवस्थादिदोषोक्तिरवयवनियमवती भवति । नच तत्र न्यूनाधिकविवेको दूरवबोधः । एवमिहापि द्रष्टव्यम् ।**

ಮೀಮಾಂಸಕರು - ಅನುಮಾನದಲ್ಲಿ ನಿಯತವಾದ ಅವಯವವನ್ನು ಒಪ್ಪದಿದ್ದರೆ ನ್ಯೂನ ಹಾಗೂ ಆಧಿಕ್ಯವೆಂಬ ನಿಗ್ರಹಸ್ಥಾನವನ್ನು ಹೇಳುವುದೇ ಅನುಪಪನ್ನವಾಗಬೇಕಾದೀತು ?

ತತ್ವವಾದಿಗಳು - ಹಾಗೇನಿಲ್ಲ. ದೂಷಣಾನುಮಾನದಲ್ಲಿ ನೀವು ನಿಯತವಾದ ಅವಯವಗಳಿರಬೇಕೆಂಬ ನಿಯಮವನ್ನು ಒಪ್ಪಿಲ್ಲ. ಅದರಂತೆ ಸಾಧನಾನುಮಾನದಲ್ಲಿಯೂ ಕೂಡ ನಿಯತ ಅವಯವವನ್ನು ಒಪ್ಪುವ ಅವಶ್ಯಕತೆಯಿಲ್ಲ ಎಂಬುದೇ ನಮ್ಮ ಅಭಿಪ್ರಾಯ.

ದೂಷಣಾನುಮಾನದಲ್ಲಿ ಅನವಸ್ಥಾದಿದೋಷಗಳನ್ನು ಹೇಳುವ ಮೂಲಕ ಅವಯವ ನಿಯಮವನ್ನು ನೀವೂ ಕೂಡ ಒಪ್ಪಿರುವುದಿಲ್ಲ. ಮತ್ತು ನ್ಯೂನ, ಆಧಿಕ್ಯ ಎಂಬ ವಿವೇಕವನ್ನೂ ಕೂಡ ದೂಷಣಾನುಮಾನದಲ್ಲಿ ಮಾಡಲು ಸಾಧ್ಯವಿಲ್ಲ. ಅದರಂತೆ ಸಾಧನಾನುಮಾನದಲ್ಲಿಯೂ ಕೂಡ ತಿಳಿಯಬೇಕು.

ವಿವರಣೆ - 'ಅವಶ್ಯವಕ್ತವ್ಯೇ ಏಕದೇಶ ಪ್ರಯೋಗಃ ನ್ಯೂನಃ' ಎಷ್ಟು ಹೇಳಿದರೆ ಪರರಿಗೆ ಶಾಬ್ದಬೋಧ ಬರುತ್ತದೋ, ಅಷ್ಟನ್ನು ಮಾತ್ರ ಹೇಳಬೇಕು. ಕಮ್ಮಿ ಹೇಳಿದರೆ ನ್ಯೂನತಾ ಎಂಬ ನಿಗ್ರಹಸ್ಥಾನ ಬರುತ್ತದೆ. ಹೆಚ್ಚು ಹೇಳಿದರೆ ಆದಿಕ್ಯವೆಂಬ ನಿಗ್ರಹ ಸ್ಥಾನ ಬರುತ್ತದೆಂದು ಪ್ರಮಾಣಲಕ್ಷಣದಲ್ಲಿ ಶ್ರೀಮಟ್ಟೀಕಾರಾಯರು ಹೇಳಿರುತ್ತಾರೆ. ಆದ್ದರಿಂದ ಪಂಚಾಯವವನ್ನು ಪ್ರಯೋಗಿಸಲೇಬೇಕೆಂಬ ನಿಯಮವಿಲ್ಲ. ಒಂದು ವೇಳೆ ಎರಡೇ ಅವಯವಗಳನ್ನು ಬೋಧಿಸಿದಾಗ ಪರರಿಗೆ ಶಾಬ್ದಬೋಧ ಬರುವ ಪ್ರಸಂಗವಿದ್ದಾಗ ಒಂದು ಅವಯವವನ್ನು ಪ್ರಯೋಗಿಸಿದರೆ ನ್ಯೂನತಾ ಎಂಬ ನಿಗ್ರಹಸ್ಥಾನವನ್ನು ಮೂರು ಅವಯವಗಳನ್ನು ಪ್ರಯೋಗಿಸಿದರೆ ಆಧಿಕ್ಯವೆಂಬ ನಿಗ್ರಹಸ್ಥಾನವನ್ನು ಹೇಳಬೇಕು ಎಂಬುದು ನಮ್ಮ ಸಿದ್ಧಾಂತ.

## ಕಾಲಾಂತರಭಾವಿಫಲದಾತೃವು ಈಶ್ವರನೆಂದು ಜೈಮಿನಿಗಳು

**ತತ್ವप्रदीपः – नच वेदप्रामाण्यानुपपत्त्या क्रियातिरिक्तस्थायिकार्यान्वेषणं युक्तम् । कालान्तरभाविफलदायिनः सर्वज्ञस्येश्वरस्य वेदसिद्धत्वोक्तेः ।**

ವೇದಪ್ರಾಮಾಣ್ಯಾನುಪಪತ್ತಿಯಿಂದ ಕ್ರಿಯೆಯಿಂದ ಅತಿರಿಕ್ತವಾದ ಸ್ಥಾಯಿಯಾದ ಅಪೂರ್ವವೆಂಬ ಕಾರ್ಯತ್ವವನ್ನು ಮೀಮಾಂಸಕರಾದ ನೀವು ಅನ್ವೇಷಣೆಯನ್ನು ಮಾಡುತ್ತಿದ್ದೀರಿ. ಇದು ಯುಕ್ತವಲ್ಲ. ಏಕೆಂದರೆ ಈಗ ಆಚರಿಸಿದ ಕ್ರಿಯೆಯಿಂದ ಕಾಲಾಂತರದಲ್ಲಿ ಹೇಗೆ ಫಲ ದೊರೆಯುತ್ತದೆ ಎಂಬ ಪ್ರಶ್ನೆಗೆ ನಿಮ್ಮ ಮೂಲಪುರುಷರಾದ ಜೈಮಿನಿಋಷಿಗಳೇ ಉತ್ತರಿಸಿದ್ದಾರೆ - 'ಸರ್ವಜ್ಞನಾದ ಈಶ್ವರನು ಕಾಲಾಂತರಭಾವಿಯಾದ ಫಲವನ್ನು ನೀಡುತ್ತಾನೆಂಬುದು ವೇದಸಿದ್ಧವಾಗಿದೆ' ಎಂದು.

